೧೮೫೭ ರ

# ಹುತಾತ್ಮರು

'ನಾರಾಯಣ ಶರ್ಮ'
ಇತಿಹಾಸಜ್ಞರು.

ಅರುಣ ಪ್ರಕಾಶನ ಹುಬ್ಬಳ್ಳಿ.

೧೯೫೫ ೧—೪—೦

# — ಪರಿವಿಡಿ —







# ಲೇಖಕನ ಹೃದ್ಗತ.

ನ ತೇಜಸ್ತೇಜಸ್ವೀ ಪ್ರಸೃತಮಪರೇಷಾಂ ಪ್ರಸಹತೇ ।
ಸ ತಸ್ಯ ಸ್ವೋ ಭಾವೋ ಪ್ರಕೃತಿನಿಯತತ್ವಾದಕೃತಕಃ ॥

ಭವಭೂತಿ-

ನಿಜವಾದ ತೇಜಸ್ವಿಯು ಪರರ ತೇಜವನ್ನೆಂದೂ ಸಹಿಸಲಾರನು. ಅದು ಅವನ ನೈಸರ್ಗಿಕ ಸ್ವಭಾವ. ಅವನ ಪ್ರಕೃತಿಯಲ್ಲಿ ಅಡಕವಾಗಿರುವ ಒಂದು ಘಟಕ; ಆದುದರಿಂದ ಅದು ಕೃತಕವಲ್ಲ.

೧೯೪೭ ನೆಯ ವರ್ಷವು ಹೇಗೆ ಭಾರತಕ್ಕೆ ಸ್ವಾತಂತ್ರ್ಯವನ್ನು ತಂದು ಕೊಟ್ಟ ವರ್ಷವೆಂದು ಸ್ಮರಣೀಯವೋ, ಹಾಗೆಯೇ ೧೮೫೭ ನೆಯ ವರ್ಷವಾದರೂ, ಭಾರತವು ಸ್ವಾತಂತ್ರ್ಯಕ್ಕಾಗಿ ಎಸಗಿದ ಮೊದಲನೆಯ ಸಮರವೆಂದು ಸ್ಮರಣಾರ್ಹವು. ಪ್ಲಾಸಿಯ ಕಾಳಗದಿಂದ ಹಿಂದುಸ್ಥಾನವು ನಮ್ಮ ಕೈ ಬಿಡಹತ್ತಿತು. ಮೊದಲು ಹೊಟ್ಟೆ ಮತ್ತು ದುಡ್ಡಿನ ಆಸೆಗೆ ಬಿದ್ದು, ನಮ್ಮಲ್ಲಿಯ ಅರಸರಿಂದ ಬ್ರಿಟಿಶರಿಗೆ ಭಾರತವನ್ನು ಗೆದ್ದು ಕೊಟ್ಟ ಭಾರತದ ಸಿಪಾಯರಿಗೆ ಬ್ರಿಟೀಶರಿಂದ ಕಾಣಿಕೆಯ ಬದಲಾಗಿ ಒದಿಕೆಯ ಪೆಟ್ಟುಗಳು ಬೀಳಹತ್ತಿದಾಗಿನಿಂದಲೇ ಸ್ವಾತಂತ್ರ್ಯದ ಸಂಗ್ರಾಮಕ್ಕೆ ಪ್ರಾರಂಭವಾಯಿತು. ಆದರೊಳಗೆ ಪರಂಪರೆಯಿಂದ ಬಂದ ರಾಜ್ಯಗಳನ್ನು ಕಸಿದುಕೊಳ್ಳ ಹತ್ತಿದಂದಿನಿಂದಂತೂ ಕೆಲವು ತೇಜಸ್ವಿಗಳಾದ ರಾಜರಲ್ಲಿ ಆ ಸಂಕಟವು ಬೆಳೆದು, ಸಾವಿನ ಸಂಗಡ ಹೋರಾಡುವಷ್ಟು ಪ್ರಬಲವಾಯಿತು. ಹಲವು ಶತಮಾನಗಳಿಂದ ಸ್ವಾತಂತ್ರ್ಯದ ಸವಿಯನ್ನುಂಡು, ಆದರೊಡನೆ ಸರಸವಾಡಿದ ಭಾರತಕ್ಕೆ ಸ್ವಾತಂತ್ರ್ಯ ಮರೆಯಾದೊಡನೆ ಉಂಟಾದ ಸಂಕಟಕ್ಕೆ ಪಾರವಿರಲಿಲ್ಲ ಕೆಲವರಿಗಂತೂ ಉಸಿರು ಕಟ್ಟಿದಂತಾಗಿ, ಬದುಕಿರುವದೇ ಅಶಕ್ಯವಾದ್ದರಿಂದ, ದೇಶಕ್ಕಾಗುವ ಹಾನಿ, ಕೊಲೆ-ಸುಲಿಗೆಗಳನ್ನು ಲಕ್ಷಿಸದೆ, ಅವರು ಸ್ವಾತಂತ್ರ್ಯಕ್ಕಾಗಿ ಹೂಡಿರುವ ಯಜ್ಞಕುಂಡದಲ್ಲಿ ತಮ್ಮ ರಾಜ್ಯ-ಧನ-ಪ್ರಾಣಗಳನ್ನು ಆಹುತಿ ಕೊಟ್ಟರು.

ತೇಜಸ್ವಿಗಳ ಜೀವನವೇ ಬೇರೆ, ಅವರ ಕಣ್ಮುಂದೆ ನಲಿದಾಡುವ ಚಿತ್ರವೇ ಬೇರೆ. ಅದರ ಬಗೆಗೆ ಅವರು ಚಿಕಿತ್ಸೆ ಮಾಡುತ್ತ ಕುಳ್ಳಿರುವದಿಲ್ಲ.

ತಮ್ಮ ಮನದಾಳದಲ್ಲಿ ನಿಂತು, ಸ್ಪಷ್ಟವಾಗಿ ನುಡಿಯುತ್ತಿರುವ ಯಾವದೋ ಒಂದು ಕಾಣದ ಕಾರಣ ಶಕ್ತಿಗೆ ತಲೆವಾಗಿ ನಡೆಯುತ್ತಿರುವರು. ಎಂಥ ಗಂಡಾಂತರಗಳು ಬಂದು ಮುತ್ತಿದರೂ, ಬೆದರದೆ-ಬೆಚ್ಚದೆ ತಮ್ಮ ಮನದೊಳು ಮಿಡಿಯುತ್ತಿರುವ ವಿಚಾರ ಸ್ವರಗಳಿಗನುಕೂಲವಾದ ತಾಳ ಹಾಕುತ್ತ ಹೊರಟಿರುವರು ಅವರಿಗೆ ಸುಖ-ವಿಲಾಸಗಳು ಸುಖವೆಂದು ಕಾಣುವದಿಲ್ಲ, ಮುಳ್ಳು ಹಾಸಿಗೆಗಳು. ಇಂಥ ತೇಜಸ್ವಿಗಳಾದ ತ್ಯಾಗಿಗಳು, ೧೮೫೭ ರಲ್ಲಿ ಮುಂದೆ ಬಂದು, ತಮ್ಮ ಸ್ವಾತಂತ್ರ್ಯ ಕಾರ್ಯ ಮಾಡಿದ್ದರಿಂದ ಅವರಿಂದ ಅವರ ವೀರ ಕಾರ್ಯಗಳು ಒದಗಿದವು. ಅದರ ಮೂಲಕ ಅವರು ಸ್ವಾತಂತ್ರ್ಯಕ್ಕಿರುವ ಬೆಲೆ ಯಾವುದಕ್ಕೂ ಸಾಟಿಯಿಲ್ಲ ಎಂಬುದನ್ನು ತೋರಿಸಿ ಕೊಟ್ಟರು

ಇಂಥ ಕೆಲ ವೀರರ ಚರಿತ್ರೆಯನ್ನು ಆಯ್ದು ವಿದ್ಯಾರ್ಥಿಗಳಿಗಾಗಿ ಬರೆಯಲಾಗಿದೆ ವಿದ್ಯಾರ್ಥಿಗಳು ಭಾವೀ ಜನಾಂಗದ ಆಧಾರಸ್ತಂಭರು. ಅವರ ಮಿದುಮನಗಳಲ್ಲಿ ಇಂಥ ಉಜ್ವಲ-ಉದಾತ್ತ ವಿಚಾರಗಳನ್ನೊಳಗೊಂಡ ಚರಿತ್ರಗಳು ನಾಟಿ ಬೆಳೆದರೆ ಅವರ ಮನಸು ಸುಸಂಸ್ಕೃತವಾಗಿ ದೊಡ್ಡದಾಗಬಹುದು. ಅವರಲ್ಲಿಯ ಸತ್ಯ, ಪ್ರಾಮಾಣಿಕತೆ, ದೇಶಾಭಿಮಾನ, ತ್ಯಾಗ ಇಂಥ ಸದ್ಗುಣಗಳ ಬೆಳವಣಿಗೆಯಿಂದಲೇ ರಾಷ್ಟ್ರ ಸಂಪನ್ನವಾಗುವದು, ಜೀವಂತವಾಗುವದು. ರಾಷ್ಟ್ರದ ಬೆಳವಣಿಗೆಗೆ ಇಂತಹ ಸ್ವಾಭಿಮಾನಿ ತೇಜಸ್ವಿಗಳ ಅವಶ್ಯಕತೆಯು ಯಾವಾಗಲೂ ಇದ್ದುದೇ. ಉದಯೋನ್ಮುಖವಾದ ರಾಷ್ಟ್ರಕ್ಕಂತೂ ಅದು ಅತ್ಯಂತ ಅವಶ್ಯ.

ಈ ದೃಷ್ಟಿಯನ್ನಿಟ್ಟುಕೊಂಡೇ ಮಕ್ಕಳಿಗೆ ಭಾರತ ಇತಿಹಾಸದಲ್ಲಿ ಬರುವ '೧೮೫೭ ರ ಬಂಡಾಯದಲ್ಲಿದ್ದ' ಕೆಲ ಜನ ಅಮರ ವೀರರ ಚರಿತ್ರೆಯನ್ನು ವಿವರವಾಗಿ ಬರೆಯಲಾಗಿದೆ. ಈ ಪುಸ್ತಕದ ಮಹತ್ವವನ್ನರಿತು ಶಿಕ್ಷಣ ವಿಭಾಗದವರು "ಪೂರಕ-ಪಠ್ಯಪುಸ್ತಕ" ವೆಂದು ಇದನ್ನು ಓದಲು ವಿದ್ಯಾರ್ಥಿಗಳಿಗೆ ಅಪ್ಪಣೆಯಿತ್ತರೆ, ಅದೊಂದು ಉಪಕಾರವಾಗುವದು. ವಿದ್ಯಾರ್ಥಿಗಳಿಗೂ ದೇಹಕ್ಕೆ ಪುಷ್ಟಿ, ಮನಸಿಗೆ ಹುರುಡನ್ನು ಒದಗಿಸುವ ಇದನ್ನೋದಿ ಅವರ ಬುದ್ಧಿಯಲ್ಲಿ ಚೈತನ್ಯವನ್ನುಂಟು ಮಾಡ ಬಹುದೆಂದು ಆಸೆ.

ಬರಹಗಾರ.

**ನಾರಾಯಣ ಶರ್ಮ.**



# ನರವೀರನಾದ

# ೧. ನಾನಾಸಾಹೇಬ ಪೇಶವೆ

## ನಾನಾಸಾಹೇಬನ ಪೂರ್ವವೃತ್ತ.

ಪೇಶವೆ ಎರಡನೇ ಬಾಜೀರಾಯನು ತನ್ನ ರಾಜ್ಯವನ್ನೆಲ್ಲ ಇಂಗ್ಲೀಷರಿಗೆ ಒಪ್ಪಿಸಿ, ತಾನು ವರ್ಷಕ್ಕೆ ಎಂಟು ಲಕ್ಷರೂಪಾಯಿ ಉಂಬಳಿಯನ್ನು ತೆಗೆದುಕೊಂಡು ಕಾನಪುರದ ಹತ್ತರ ಬ್ರಹ್ಮಾವರ್ತಕ್ಕೆ ಹೋದನಷ್ಟೇ! ಬಾಜೀರಾಯನಿಗೆ ಧರ್ಮದಲ್ಲಿ ಹುಚ್ಚುನಂಬಿಗೆ ಇದ್ದುದದರಿಂದ, ತನ್ನ ಧರ್ಮಕಾರ್ಯಕ್ಕೆ ಅನುಕೂಲವಾಗಬೇಕೆಂದು ಪುಣೆಯ ಪ್ರಾಂತದಿಂದ ಹಲವು ಬ್ರಾಹ್ಮಣ ಬಡಕುಟುಂಬದವರನ್ನು ತನ್ನ ಸಂಗಡ ಒಯ್ದನು. ಹೀಗೆ ಅವನನ್ನು ಹಿಂಬಾಲಿಸಿದವರಲ್ಲಿ ಮಾಧವರಾವಭಟ್ಟ ಎಂಬವನೊಬ್ಬನು. ಇವನ ಊರು ಮಾಥೇರಾನದ ನೆರೆಯಲ್ಲಿರುವ ವೇಣುಗ್ರಾಮ. ಇವನ ಮಗನೇ ನಾನಾಸಾಹೇಬನು.

## ಬಡವನಮನೆಗೆ ಭಾಗ್ಯಲಕ್ಷ್ಮಿ.

ಬಾಜೀರಾಯನಿಗೆ ಮಕ್ಕಳಿರಲಿಲ್ಲ. ತನ್ನ ವಂಶ ದೀಪವು ಬೆಳಗುತ್ತಿರ ಬೇಕೆಂದು ಒಬ್ಬರಹಿಂದೆ ಒಬ್ಬರಂತೆ ಮೂರು ಮಂದಿ ಮಕ್ಕಳನ್ನು ಅವನು ದತ್ತಕಮಾಡಿಕೊಂಡನು. ಅವರಲ್ಲಿ ನಾನಾಸಾಹೇಬನೇ ಮೊದಲನೆಯವನು. ನಾನಾಸಾಹೇಬನು ಚಿಕ್ಕಂದಿನಲ್ಲಿ ಬಹು ಚಲುವ. ಇವನ ಮುಖ, ಮೈಮಾಟ, ಮೂಗು, ಕಣ್ಣು, ಹಣೆ, ಹುಬ್ಬು ಮೊದಲಾದವುಗಳು ಎಂಥವರ ಮನವನ್ನೂ ಸೆಳೆಯುತ್ತಿದ್ದವು; ಅಂದಮೇಲೆ ಮಕ್ಕಳನ್ನೇ ಕಾಣದ ಬಾಜೀರಾಯನನ್ನೇನ್ನು ಕೇಳುವದು? ಆವನಿಗೆ ಮಕ್ಕಳೆಂದರೆ ಬಲುಮುದ್ದು. ಅದಕ್ಕೆ ತಕ್ಕಂತೆ ನಾನಾ ಕೂಡ ಮುದ್ದುಬರುವಂಥ ಹುಡುಗನಿದ್ದುದರಿಂದ ದರ್ಬಾರದಂಥ ಓಲಗ ಗಳಿಗೆ ನಾನಾನನ್ನು ಅಕಸ್ಮಾತ್ತಾಗಿ ಕರಕೊಂಡುಬಂದಾಗ ಬಾಜೀರಾಯನು ಅವನನ್ನು ಎತ್ತಿ ಮುದ್ದಾಡದೆ ಇರುತ್ತಿರಲಿಲ್ಲ. ಇವೆಲ್ಲ ಕಾರಣಗಳಿಂದ ಬಾಜೀ ರಾಯನು ತನಗೆ ಅಚ್ಚುಮೆಚ್ಚಾಗಿರುವ ಎರಡೂವರೆವರ್ಷದ ಬಾಲಕನನ್ನೇ ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ಶಾಸ್ತ್ರವಿಧಿಯಂತೆ ದತ್ತಕ ಮಾಡಿ ಕೊಂಡನು. ಬಡವನ ಮನೆಗೆ ಭಾಗ್ಯಲಕ್ಷ್ಮಿ ಬಂದಳು. ಬಾಜೀರಾಯನು ಕೃತ ಕೃತ್ಯನಾದೆನೆಂದು ತಿಳಿದುಕೊಂಡಂತೆ, ಮಾಧವರಾಯರು ಭಾಗ್ಯವಂತನಾದನು.

## ಶಿಕ್ಷಣ.

ಆಗಿನ ಕಾಲಕ್ಕೆ ಎಲ್ಲ ಅರಸು ಮಕ್ಕಳಿಗೆ ಧಾರ್ಮಿಕ ಮತ್ತು ಯುದ್ಧ ಕಲೆಯ ಶಿಕ್ಷಣ ಕೊಡುತ್ತಿರುವಂತೆ, ನಾನಾಸಾಹೇಬನು ಮೊದಲು ಬ್ರಾಹ್ಮಣ ಪಂಡಿತರ ಕೈಯಲ್ಲಿ ಧರ್ಮಶಿಕ್ಷಣವಲ್ಲದೆ, ಓದು–ಬರೆಹ–ಕಾಗದಪತ್ರಗಳನ್ನೋದುವದು ಕತ್ತಿಯ ಒರಸೆ, ಭಲ್ಲೆಎಸೆಯುವದು ಮುಂತಾಗಿ ಯುದ್ಧವಿದ್ಯೆಯನ್ನು ಕಲಿ ಸಿದನು. ಕುದುರೆ ಹತ್ತುವದರಲ್ಲಿ ಅವನನ್ನಾರೂ ಮೀರಿಸುತ್ತಿರಲಿಲ್ಲ. ಬರು ಬರುತ್ತ ಕುದುರೆಗಳೆಂದರೆ ನಾನಾಸಾಹೇಬನಿಗೆ ಅತ್ಯಂತ ಪ್ರೀತಿಯ ಪ್ರಾಣಿ ಗಳಾದ್ದರಿಂದ, ತನ್ನ ಲಾಯದಲ್ಲಿ ಅವನು ಹೆಸರಾದ ಜಾತಿಯ ಅತ್ಯುತ್ತಮ ಕುದುರೆಗಳನ್ನಿರಿಸಿದ್ದನು. ಕುದುರೆಗಳಂತೆ ಅಪರೂಪವಾದ ಮತ್ತು ಮೇಲಾದ

ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿದ್ದನು. ಇಷ್ಟೇ ಅಲ್ಲದೆ; ಪ್ರಾಣಿಗಳನ್ನೂ ಸಾಕುವದೊಂದು ಚಟವೇ ಅವನದಾಗಿತ್ತು ಆದುದರಿಂದ ಅವನು ತನ್ನ ಸಂಗ್ರಹದಲ್ಲಿ ಒಂದೆಡೆ ಚಿಗರೆ, ಗಂಡೆರಳೆ, ಒಂಟೆ ಮುಂತಾದವುಗಳನ್ನೂ ಸಲುಹಿದ್ದನು. ಅವನು ಸಾಕುವ ಈ ಪ್ರಾಣಿಗಳನ್ನು ನೋಡಲಿಕ್ಕೆಂದು ದೂರ ದೇಶದ ಜನರು ಬ್ರಹ್ಮಾವರ್ತಕ್ಕೆ ಆಗಾಗ ಬರುತ್ತಿದ್ದರು. ನಾನಾ ಸಾಹೇಬನು ಪ್ರಾಯಕ್ಕೆ ಬಂದಮೇಲೆ ಬಾಜೀರಾಯರು ಸಾಂಗಲಿಯ ಅರಸುಮನೆತನದಲ್ಲಿಯ ಒಳ್ಳೆಯ ಕನ್ನೆಯನ್ನು ಗೊತ್ತುಮಾಡಿ, ಸಂಭ್ರಮದಿಂದ ಮದುವೆ ಮಾಡಿದರು.

## ಬ್ರಹ್ಮಾವರ್ತದ ಅರಮನೆ.

ಬ್ರಹ್ಮಾವರ್ತವು ಚಿಕ್ಕದಾದರೂ ಸುಂದರವಾದ ಊರು. ಊರಮಗ್ಗಲಲ್ಲಿಯೇ ಗಂಗೆಯ ಶಾಂತ ಮತ್ತು ಗಂಭೀರ ಪ್ರವಾಹ. ಅರಮನೆಯ ಮುಂದೆ ನಿಂತರೆ, ಗಂಗಾದೇವಿಯ ವಿಶಾಲ ಮತ್ತು ಮನೋಹರವಾದ ಒಡಲು ಎಸೆಯುತ್ತಿತ್ತು. ಹೊಳೆಯ ದಂಡೆಯಲ್ಲಿರುವ ಘಟ್ಟಗಳಲ್ಲಿ ಸ್ತ್ರೀ–ಪುರುಷರು ಸ್ನಾನಕ್ಕಾಗಿ ಕಿಕ್ಕಿರಿದಿರುತ್ತಿದ್ದರು. ಅರಮನೆಯು ಹಳೆಯ ಮಾದರಿಯ ಭವ್ಯವಾದ ಕಟ್ಟಡ. ಅದರ ಎರಡೂ ಬದಿಗೆ ಕಚೇರಿ ಕಟ್ಟಿಗಳು, ಬ್ರಾಹ್ಮಣರಿಗಾಗಿ ಏರ್ಪಡಿಸಲ್ಪಟ್ಟ ಅಗ್ರಹಾರ, ಮತ್ತು ಕೇರಿಗಳು. ಊರ ನಡುವೆ ಅಂಗಡಿ ಸಾಲು, ಅರಮನೆ ಮುಂಬದಿಯಲ್ಲಿರುವ ದೊಡ್ಡ ಪಡಸಾಲೆಯಲ್ಲಿ ಅಂದಚೆಂದವಾದ ಜಮುಖಾನೆಗಳನ್ನು ಹಾಸಿದ್ದು, ಹೆಚ್ಚು ಗಾಳಿ, ಬೆಳಕು ಬರಬಾರದೆಂದು ಬಣ್ಣ ಬಣ್ಣದ ಕಿನಕಾಪಿನ ಪರದೆಗಳನ್ನು ಇಳಿಬಿಟ್ಟಿದ್ದರು. ಗೋಡೆಗಳಿಗೆ ಸುಂದರವಾಗಿ ಕೆತ್ತಿದ ಚೌಕಟ್ಟುಗಳಲ್ಲಿ ದೊಡ್ಡ–ದೊಡ್ಡ ನಿಲುಗನ್ನಡಿಗಳು, ಆನೆಯ ಕೋರೆಗಳಲ್ಲಿ ಚಿತ್ರ--ಚಿತ್ರವಾಗಿ ಕೆತ್ತಿರುವ ಬಗೆ ಬಗೆಯ ಕೈಗಾರಿಕೆಯ ಮಾದರಿಗಳು ಕಂಗೊಳಿಸುತ್ತಿದ್ದು, ಅವುಗಳಲ್ಲಿ ವಿವಿಧ ಬಣ್ಣದ ರತ್ನ, ವಜ್ರ, ಮುಂತಾದ ಬೆಲೆಯುಳ್ಳ ಹರಳುಕಲ್ಲುಗಳನ್ನು ಕೂಡ್ರಿಸಿದ್ದರು. ಇಲ್ಲಿಯೇ ಬಾಜೀರಾಯನು ಯಾವತ್ತೂ ವೇಶ್ಯೆಯರ ಕುಣಿತ, ಹಾಡು, ತಮಾಷೆ, ಇವುಗಳಲ್ಲಿ ವೇಳೆ ಕಳೆಯುತ್ತಿದ್ದನು. ಬೆಳಗಿನಿಂದ

ಮಧ್ಯಾಹ್ನವೆಲ್ಲ ಧರ್ಮಕಾರ್ಯ ಮಂತ್ರ ತಂತ್ರ, ಬ್ರಾಹ್ಮಣರ ಊಟ ಮುಂತಾದವುಗಳಲ್ಲಿ ತೊಡಗಿರುವನು ಬಾಜೀರಾಯನು ಸ್ವಭಾವದಿಂದ ಬಹು ಪ್ಯಲಿ ಮತ್ತು ದುಂದುಗಾರ. ಯುರೋಪಿಯನ್ನರಿಗೆ ಬಲು ಮರ್ಯಾದೆ ಮಾಡುವವನು. ಆದರಿಂದ ತಮಗೆ ಬೇಸರ ಬಂದಾಗ, ಯುರೋಪಿಯನ್ನ ಅಧಿಕಾರಿಗಳು ತಮ್ಮ ಹೆಂಡಿರು—ಮಕ್ಕಳನ್ನು ಕಟ್ಟಿಕೊಂಡು, ತಿಂಗಳುಗಟ್ಟಲೆ ಬಾಜೀರಾಯನ ಬೀಗತನವನ್ನು ಅನುಭವಿಸಲಿಕ್ಕೆಂದು ಬ್ರಹ್ಮಾವರ್ತಕ್ಕೆ ಹೋಗಿ ಇರುವರು. ಅಧಿಕಾರಿಗಳಿಗೆ ಸವಿ ಸವಿ ಊಟ ತಿನಸುಗಳನ್ನು ಬೇಕಾದ ಸುಖಸಾಧನೆಗಳನ್ನು ಪೂರೈಸುವದರಲ್ಲಿ ಬಾಜೀರಾಯನಿಗೆ ನಾಚಿಕೆ ಎನಿಸುತ್ತಿರಲಿಲ್ಲ. ಯುರೋಪಿಯನ್ನರಂತೂ ಹೇಳಿ ಕೇಳಿ ತಿನ್ನಲಿಕ್ಕೆ ಹಕ್ಕುದಾರರು. ಯಾಕಂದರೆ ಕಂಪನಿ ಸರಕಾರದವರು ಬಾಜೀರಾಯನನ್ನು ಕುಳ್ಳಿರಿಸಿ, ವರ್ಷಕ್ಕೆ ಎಂಟು ಲಕ್ಷ ರೂಪಾಯಿ ಕೊಡುತ್ತಿದ್ದರು. ಈ ಭಾವನೆ ಇದ್ದ ಮೇಲೆ ಯುರೋಪಿಯನ್ನರಿಗೆ ಏನು ಮತ್ತು ಎಷ್ಟು ಮಾಡಿದರೂ ಕಡಿಮೆಯೇ ಸರಿ; ಇಷ್ಟಕ್ಕೆ ನಿಲ್ಲದೆ, ಬಾಜೀರಾಯನು ಇಂಗ್ಲೀಷರು ಕೊಡುತ್ತಿರುವ ೮ ಲಕ್ಷ ರೂಪಾಯಿಗಳಲ್ಲಿ ಕೆಲವು ಹಣ ಉಳಿಸಿ, ಸ್ವರಾಜ್ಯ ಸ್ವದೇಶ ರಕ್ಷಣೆಗಾಗಿ ಶೀಖರು ಗುರುಗೋವಿಂದಸಿಂಗನ ನಾಯಕತ್ವದಲ್ಲಿ ನಡೆಸಿರುವ ಹೋರಾಟದಲ್ಲಿ ಶೀಖರಿಗೆ ನೆರವಾಗದೆ, ತನ್ನ ಖರ್ಚಿನಿಂದ ಸಾವಿರ ಜನ ಶೂರರನ್ನು ಮತ್ತು ಸಾವಿರ ಕಾಲಾಳುಗಳನ್ನೂ ಇಂಗ್ಲೀಷರ ಸಹಾಯಕ್ಕ ಕಳಿಸಿದನು. ಮತ್ತು ಅಫಗಾಣಿಸ್ತಾನದೊಳಗೆ ಹೂಡಿದ ಯುದ್ಧದಲ್ಲಿ ಇಂಗ್ಲೀಷರಿಗೆ ೮೦ ಲಕ್ಷರೂಪಾಯಿಗಳನ್ನು ಕೊಟ್ಟನು. ಇವೆಲ್ಲ ರಾಷ್ಟ್ರಘಾತುಕ ಕಾರ್ಯಗಳನ್ನು ನೋಡಿದರೆ, ಪೇಶವೆಯರಂಥ ಸ್ವಾಭಿಮಾನ ಸಂಪನ್ನ ಕುಲಕ್ಕೆ ಬಾಜೀರಾಯನು ಹೇಗೆ ಕೊಡಲಿಯಾದನೆಂಬುದು ವ್ಯಕ್ತವಾಗುತ್ತದೆ.

## ಬಾಜೀರಾಯನ ಮರಣ.

ಬಾಜೀರಾಯನು ೧೮೫೧ ರಲ್ಲಿ ತೀರಿಕೊಂಡನು ನಾನಾಸಾಹೇಬನನ್ನಂತೂ ಮೊದಲೇ ಅವನು ಮಗನನ್ನಾಗಿ ಮಾಡಿಕೊಂಡಿದ್ದನು. ಆದರಂತೆ ಕಾಗದ ಪತ್ರಗಳೂ ಆಗಿದ್ದವು; ಆದರೇನು? ಇದಕ್ಕೆ ಮುಂಚೆಯೇ ಲಾರ್ಡ

ಡಾಲಹೌಸಿಯು ದೇಶೀಯ ಸಂಸ್ಥಾನ ರಾಜ್ಯಗಳನ್ನು ಒಂದೊಂದಾಗಿ 'ಮಕ್ಕಳಿಲ್ಲದ ರಾಜ್ಯ'ಗಳೆಂದು ಮುದ್ರೆಯೊತ್ತಿ, ದತ್ತಕ ತೆಗೆದುಕೊಂಡ ಮಕ್ಕಳನ್ನು ಮೂಲೆಗೊತ್ತಿರಿಸಿ, ಅವರ ರಾಜ್ಯವನ್ನು ಬ್ರಿಟೀಶ ರಾಜ್ಯಕ್ಕೆ ಸೇರಿಸಿಕೊಳ್ಳುವ ದಾಳಿನಡಿಸಿದ್ದನು. ಅದಾಗಲೇ ಸಾತಾರೆ, ತಂಜಾವರ, ಜೈನಪುರ, ನಾಗಪುರ, ಸಂಬಳಪುರ, ಓಛಾರ್ ಮುಂತಾದವುಗಳನ್ನು ಸೇರಿಸಿಕೊಂಡಿದ್ದನು. ಈ ಧೋರಣೆಯನ್ನು ಬ್ರಿಟಿಶರು ೧೮೨೪ ರಿಂದಲೇ ಪ್ರಾರಂಭಮಾಡಿ, ಕರ್ನಾಟಕದಲ್ಲಿಯ ಕಿತ್ತೂರ ದೇಸಗತಿಯನ್ನು ಇದೇ ನೆವದಿಂದ ತೆಗೆದುಕೊಂಡಿದ್ದರು. ಆದರಂತೆ ಬಾಜೀರಾಯನು ತೀರಿಕೊಂಡ ಕ್ಷಣವೇ ನಾನಾಸಾಹೇಬನಿಗೆ ಬಾಜೀರಾಯನಿಗೆ ಸಲ್ಲುತ್ತಿರುವ ೮ ಲಕ್ಷ ರೂಪಾಯಿ 'ಉಂಬಳಿ'ಕೂಡ ಇನ್ನು ಮುಂದೆ ಕೊಡಲಾಗದೆಂದು ಸಾರಿದರು.

## ನಾನಾಸಾಹೇಬನ ದೂರು.

ಬಾಜೀರಾಯನು ಸತ್ತಕಾಲಕ್ಕೆ ನಾನಾಸಾಹೇಬನಿಗೆ ೨೭ ವರ್ಷ ವಾಡಿಕೆಯಂತೆ ಅವನು ಆ ಕಾಲಕ್ಕೆ ಕಂಪನಿಯವರಿಗೆ ತನ್ನ ಪಾಡನ್ನು ಹೇಳಿಕೊಳ್ಳುವ ಮನವಿಯೊಂದನ್ನು ಕಳಿಸಿದನು. ಆದರಲ್ಲಿ 'ತಾವು ನನಗೆ ಮತ್ತು ನನ್ನ ಕುಟುಂಬಕ್ಕೆ ಬಾಜೀರಾಯರಿಗೆ ಕೊಡುತ್ತಿದ್ದ ಉಂಬಳಿಯನ್ನು ಸಲ್ಲಿಸದಿದ್ದರೆ, ನಮ್ಮ ರಾಜ್ಯವು ನಿಮ್ಮ ಕೈಯಲ್ಲಿರಲು ಕಾರಣವೇನು? ನಿಮ್ಮ ಕೈಯಲ್ಲಿ ನಮ್ಮ ರಾಜ್ಯವು ಇರಬೇಕು. ಆದರಬದಲಾಗಿ ನಮಗೆ ಉಂಬಳಿ ಮಾತ್ರ ದೊರೆಯಬಾರದು. ಎಂಬೀ ನ್ಯಾಯವು ಶುದ್ಧ ಅಸಂಬದ್ಧ ಮತ್ತು ಅನ್ಯಾಯದ್ದು. ಬಾಜೀರಾಯರು ತಮ್ಮ ಉಂಬಳಿಯ ಹಣದೊಳಗಿನ ಬಹುಮಟ್ಟಿಗೆ ಹಣವನ್ನು ಉಳಿಸಿದ್ದರಿಂದ, ಅವರ ಕುಟುಂಬದವರಿಗೆ ಅದಷ್ಟೇ ಸಾಕು, ಎಂದು ಮುಂತಾಗಿ (ಕಂಪನಿಯವರು) ಉತ್ತರಕೊಟ್ಟಿರುವಿರಿ. ಆದರೆ ಕಂಪನಿಯವರು ಪೆನ್‌ಶನ್‌ಪಡೆಯುವ ತಮ್ಮ ಸೇವಕರಿಗೂ ಇದೇ ಪ್ರಶ್ನವನ್ನು ಕೇಳುವರೇನು? ಕೈಕೆಳಗಿನ ಸೇವಕರಿಗೆ ಕೇಳಲಿಕ್ಕಾಗದ ಮಾತನ್ನು ಕಂಪನಿಯವರು ಅರಸು ವಂಶದವರಿಗೆ ಹೇಳುವದು ಯುಕ್ತವಾದೀತೆ?' ಎಂದು ಮುಂತಾಗಿ ಬರೆದುಕೊಂಡನು. ಇದಿಷ್ಟರಿಂದಲೇ ಕಂಪನಿಯವರು

ಹೇಗೆ ಅತ್ಯಾಸೆಗೆ ಬಲಿಬಿದ್ದು, ಅಡ್ಡದಾರಿ ಹಿಡಿದಿರುವರೆಂಬುದನ್ನೂ ಮನ ದಟ್ಟು ಮಾಡಿಕೊಂಡನು. ಮುಂದೇನು ಎಂಬುವ ಚಿಂತೆಯು ಅವನ ಕರುಳು ಕೊರೆಯತೊಡಗಿತು! ಸ್ವಾಭಿಮಾನಜ್ಯೋತಿಯು ಮೆಲ್ಲಗೆ ಹೊತ್ತಿಕೊಂಡಿತು!

## ಸ್ವಾಭಿಮಾನ ಜ್ಯೋತಿ ಎಚ್ಚತ್ತಿತು.

ನಾನಾಸಾಹೇಬನು ಬಡಮನೆತನದಲ್ಲಿ ಹುಟ್ಟಿದ್ದರೂ, ಅರಸು ಮನೆ ತನದಲ್ಲಿ ಅರಸೊತ್ತಿಗೆಯ ವಿಲಾಸ–ವಿಹಾರಗಳನ್ನು ಅನುಭವಿಸುತ್ತ ಬೆಳೆದವ ನಾದ್ದರಿಂದ, ತನ್ನ ಕುಲ–ಪರಂಪರೆಯ ಅಭಿಮಾನವು ಅವನ ರೋಮ ರೋಮಗಳಲ್ಲಿ ಮಿಡಿಯುತ್ತಿತ್ತು. ಅಭಿಮಾನಧನರಿಗೆ ಐಶ್ವರ್ಯ ಸುಖವಿಲಾಸ ಗಳು ಆನುಷಂಗಿಕ ಫಲಗಳೇ ಹೊರ್ತು ಸ್ಥಾಯಿಫಲಗಳಲ್ಲ. ತಮ್ಮ ಜೀವ ನದ ಪರಿಪಕ್ವಫಲವೆಂದರೆ, ಚಿರವಾದ ಕೀರ್ತಿ. ಅದನ್ನು ಗಳಿಸಲು ಅವರು ತಮ್ಮ ಅನಿತ್ಯವಾದ ದೇಹವನ್ನು ನಿವಾಳಿಸಿ ಚಲ್ಲಲು ಹಿಂದುಮುಂದೆ ನೋಡು ವದಿಲ್ಲ. ತಾನು ಮೊದಲನೆಯ ಬಾಜೀರಾಯ, ಮಾಧವರಾಯರಂಥ ಜಾಜ್ವಲ್ಯ ಅಭಿಮಾನ ಮೂರ್ತಿಗಳ ಮನೆತನಕ್ಕೆ ಬಂದವನು ಶಿವಾಜೀಮಹಾರಾಯ ರಂಥ ಮಹಾರಾಷ್ಟ್ರ ರಾಜ್ಯಸ್ಥಾಪಕನ ಪರಂಪರೆಗೆ ಸೇರಿದವನು, ಎಂಬೀ ಅರಿವು ಚನ್ನಾಗಿದ್ದುದರಿಂದ ಇಂಥ ಸಂದುಕಟ್ಟಿನ ಸಮಯದಲ್ಲಿ ತನ್ನಕರ್ತವ್ಯ ವೇನೆಂಬಬಗ್ಗೆ ಅವನು ಹಗಲಿರುಳು ಯೋಚಿಸತೊಡಗಿದನು.

## ಬಾಜೀರಾಯನ ತರುವಾಯದ ಸ್ಥಿತಿಗತಿ.

ಬಾಜೀರಾಯನು ತೀರಿಕೊಂಡಮೇಲೆ ಅವನನ್ನಾಶ್ರಯಿಸಿಕೊಂಡಿರುವ ಹಲವು ಬ್ರಾಹ್ಮಣ ಕುಟುಂಬ, ಕಚೇರಿಕಟ್ಟೆ, ಕುದುರೆಯ ಪಾಗಾ, ಮತ್ತು ಇದ್ದುಬಿದ್ದ ದಂಡಿನವರ ಆಳುಹೋಳುಗಳ ಭಾರವೆಲ್ಲ ನಾನಾಸಾಹೇಬನ ಮೇಲೆಯೇ ಬಿದ್ದಿತು. ಅವನ ಅಂದಿನ ದೇಹಸ್ಥಿತಿ, ಅವನ ಚಟುವಟಿಕೆ ಮುಂತಾದವುಗಳನ್ನು ಕುರಿತು, ಒಬ್ಬ ಇಂಗ್ಲೀಷ ಅಧಿಕಾರಿಯು ಹೀಗೆ ಬರೆದಿಟ್ಟಿರುವನು:— ನಾನು ಕಂಡಾಗ ನಾನಾಸಾಹೇಬನು ೨೮ ವರ್ಷದವ ನಿದ್ದರೂ, ನಾಲ್ವತ್ತರಂತೆ ಕಾಣುತ್ತಿದ್ದನು. ಅವನದು ತುಂಬುಮೈ, ದುಂಡು

ಮುಖ, ಕಣ್ಣುಗಳು ಹುಲಿಯಂತೆ ಹೊಳೆಯುತ್ತಿದ್ದು, ಮನಸಿನಲ್ಲೇನೋ ಗಂಭೀರ ವಿಚಾರಗಳ ಕೋಲಾಹಲ ನಡೆದಿರುವಂತೆ ಇತ್ತು. ಅವನ ಮುಖ ಮತ್ತು ಮೈಯಲ್ಲಿ ರಕ್ತವು ಉಕ್ಕುತ್ತಿರುವಂತಿತ್ತು. ಮತ್ತು ಮಾತಿನಲ್ಲಿ ಹಾಸ್ಯರಸವು ನಲಿಯುತ್ತಿದ್ದು, ಅವನಿಗೆ ಯಾವ ಕೆಟ್ಟ ಚಟಗಳೂ ಇರಲಿಲ್ಲ ದರ್ಬಾರಿನಲ್ಲಿ ಕುಳಿತಾಗ, ನಾನಾಸಾಹೇಬನು ಕಿನಗಾಪಿನ ಝುಗಝುಗಿಸುವ ಉಡುವನ್ನು ತೊಟ್ಟು, ಮೈಮೇಲೆ ಮತ್ತು ತಲೆಯಮೇಲಿನ ಮುಂಡಾಸ ದೊಳಗೆ ವಿಧವಿಧದ ಮುತ್ತು-ರತ್ನ-ವಜ್ರಗಳನ್ನು ಧರಿಸಿರುತ್ತಿದ್ದುದರಿಂದ, ಅವನ ವೈಭವವನ್ನು ಕಂಡು ಇಂಗ್ಲೀಷ ಅಧಿಕಾರಿಗಳು ಬೆರಗಾಗುತ್ತಿದ್ದರು. ತನ್ನ ಅರಸೊತ್ತಿಗೆಯ ವೈಭವಕ್ಕೆ ತಕ್ಕಂತೆ. ಅವನ ಮನಸು ಕೂಡ ಬಹು ಉದಾರ ಮತ್ತು ಸಹಾನುಭೂತಿಸಂಪನ್ನವಿದ್ದುದರಿಂದ, ಅವನ ವಿಷಯದಲ್ಲಿ ಯಾರಲ್ಲಿಯೂ ಅಪ್ರೀತಿಯಿರಲಿಲ್ಲ. ಕಂಪನಿ ಸರಕಾರದವರು ತನ್ನ ಹಕ್ಕಿನ ಉಂಬಳಿಯನ್ನು ಮುಳುಗಿಸಿ, ತನ್ನನ್ನು ಕಷ್ಟಕ್ಕೀಡುಮಾಡಿದ್ದರೂ, ಅವನಿಗೆ ಅದರ ಪರಿವೆ ಇರಲಿಲ್ಲ. ಇಷ್ಟೇ ಅಲ್ಲದೆ, ತನ್ನ ಅರಮನೆಗೆ ತಂದೆ ಇರುವಾಗಿ ನಂತೆ, ಇಂಗ್ಲೀಷ ಅಧಿಕಾರಿಗಳು ವಿಶ್ರಾಂತಿಗಾಗಿ ಬಂದರೆ, ಅವರಿಗೆ ಮಾನ-ಮರ್ಯಾದೆ ಮಾಡಿ, ಬೆಲೆಯುಳ್ಳ ಶಾಲು, ಮುತ್ತು-ರತ್ನಗಳ ಕಾಣಿಕೆಯ ನ್ನಿತ್ತು ಕಳಿಸುವನು. ಇದರಿಂದ ಇಂಗ್ಲೀಷ ಅಧಿಕಾರಿಗಳು ಮತ್ತು ಸಾಮಾನ್ಯರಿಗೆ ಕೂಡ ನಾನಾಸಾಹೇಬನು ಅತ್ಯಂತ ಪ್ರೀಯನಾಗಿದ್ದನು. ತನ್ನೆಡೆ ಬರುವ ಇಂಗ್ಲೀಷರೊಡನೆ ಅವನು ಆಗಾಗ, ಕಂಪನಿಯವರ ಆಳಿಕೆ, ಅವರ ಧೋರಣೆ ಮುಂತಾದವುಗಳನ್ನು ಕುರಿತು ಚರ್ಚಿಸುವನು. ಅವನು ಇಂಗ್ಲೀಷ ವೃತ್ತಪತ್ರಿಕೆಗಳನ್ನು ತರಿಸುತ್ತಿದ್ದು, ಅವುಗಳಲ್ಲಿಯ ವಿಷಯಗಳನ್ನು ತನಗೆ ಓದಿ ಹೇಳಲು ಟಾಡ್ ಎಂಬೊಬ್ಬ ಇಂಗ್ಲೀಷ ಗೃಹಸ್ಥನನ್ನು ಇಟ್ಟುಕೊಂಡಿದ್ದನು. ಪರರಾಷ್ಟ್ರಗಳಲ್ಲಿ ನಡೆಯುವ ರಾಜಕೀಯ ಆಗುಹೋಗುಗಳನ್ನು ಶಾಂತವಾಗಿ ಆಳವಾಗಿ ನಿರೂಪಿಸುತ್ತಿದ್ದನು. ಹೀಗಿರುವ ನಾನಾಸಾಹೇಬನಿಗೆ ಇಂಗ್ಲೀಷರು ಸೋಮಾರಿ, ಅರೆದಡ್ಡ ಮತ್ತು ಸ್ನೇಹಪರನೆಂದು ಅನ್ನುತ್ತಿದ್ದರಂತೆ!



# ದೇಶದಲ್ಲಿದ್ದ ಅಸಂತೋಷದ ಧಗೆ.

ಕಂಪನಿಯವರು ಹಿಂದುಸ್ಥಾನಕ್ಕೆ ಬಂದು, ವ್ಯಾಪಾರ ನಿಮಿತ್ತದಿಂದ ಮೆಲ್ಲಗೆ ದೇಶೀಯ ಅರಸರ ಕಲಹಗಳಲ್ಲಿ ಸೇರಿ, ಯಾರೊಬ್ಬರ ಪಕ್ಷಕಟ್ಟಿ, ತಮ್ಮ ಹಿರಿತನವನ್ನು ಸ್ಥಾಪಿಸುವ ಹಂಚಿಕೆಯಲ್ಲಿದ್ದರು. ಮತ್ತು ತಮ್ಮಲ್ಲಿಯ ಅರಸರ ಹುಚ್ಚುತನ, ಸುಖವಿಲಾಸದ ಲೊಲುಪತೆ ಇವುಗಳಮೂಲಕ ಅವರಲ್ಲಿ ಆಳುವ ಬುದ್ಧಿ, ರಾಜಕಾರ್ಯದ ದೋರಣೆ ಎಂಬ ಗುಣಗಳು ಪೂರಾ ನಶಿಸಿ ಹೋಗಿದ್ದವು. ಮೇಲಾಗಿ ಸೈನ್ಯದ ಶಿಸ್ತು ಮುಂತಾದವು ಇವರಿಗೇನೂ ಗೊತ್ತಿರಲಿಲ್ಲ. ವೈಯ್ಯಲ್ಲಿ ಸಾಮರ್ಥ್ಯಮಾತ್ರ ಚನ್ನಾಗಿತ್ತು; ಅದರಿಂದ ಕಂಪನಿಯವರು ನಮ್ಮಲ್ಲಿಯ ಸೀಪಾಯರನ್ನು ಯುರೋಪಿಯನ್ನ ಸೇನಾನಾಯಕನ ಕೈಯಲ್ಲಿ ಕೊಟ್ಟು, ಅವರಿಂದ ಯುದ್ಧ ಕಲಿಸಹತ್ತಿದರು ಪ್ಲಾಸಿಯಿಂದ ಮೊದಲುಗೊಂಡು ಉತ್ತರ ಹಿಂದುಸ್ತಾನ ಮತ್ತು ದಕ್ಷಿಣ ಹಿಂದುಸ್ತಾನದಲ್ಲಿಯ ದೊಡ್ಡ ದೊಡ್ಡ ಸಂಸ್ಥಾನಗಳನ್ನುರುಳಿಸುವ ಕಾರ್ಯದಲ್ಲಿ ನಮ್ಮ ಸೀಪಾಯರೇ ಮುಖ್ಯವಾಗಿ ಕಂಪನಿಯವರಿಗೆ ಸಹಾಯಕರಾಗಿದ್ದರೂ, ಅವರಿಗೆ ಒಳ್ಳೇ ತಿನಿಸು-ತಿಂಡಿ ಭತ್ತೆ-ಬಡತೆಗಳೇನು ಸಿಗುತ್ತಿರಲಿಲ್ಲ. ನಮ್ಮ ಸೀಪಾಯರನ್ನವರು ಬಹಳವಾಗಿ ಹೀನೈಸಿ, ಅವರನ್ನು ಕೆಟ್ಟರೀತಿಯಿಂದ ನಡಿಸಿಕೊಳ್ಳುತ್ತಿದ್ದರು. ಕಂಪನಿಯ ಕೆಂಪುಮುಖದ ಅಧಿಕಾರಿಗಳು ಒಂದೆರಡು ಒಳ್ಳೆಯ ಮಾತುಗಳನ್ನಾಡಿದರೆ, ಬೇಕಾದಂಥ ಸಾಹಸದ ಕಾರ್ಯಗಳನ್ನು ಮಾಡಲಿಕ್ಕೆ ಸಿದ್ಧರಾಗಿರುವ ಸೀಪಾಯಿಗಳಿಗೆ 'ಭಲೆ ಬಾಪು' ಎಂದು ಕಂಪನಿಯ ಸೇನಾನಾಯಕರು ಒಂದು ದಿನವೂ ಚಪ್ಪರಿಸುತ್ತಿರಲಿಲ್ಲ; ಇದಕ್ಕೆ ವಿರುದ್ಧವಾಗಿ, ವೆಲ್ಲಸ್ಲಿಯ ಆಳಿಕೆಯಲ್ಲಿ ಯುದ್ಧದಲ್ಲಿ ಗಾಯಗೊಂಡ ದೇಶೀಯ ಸೀಪಾಯರನ್ನು ಆರೈಕೆಗಾಗಿ ಆಸ್ಪತ್ರೆಗೆ ಕಳಿಸದೆ, ಗುಂಡಿನ ಬಾಯಿಗೆ ಕೊಡುತ್ತಿದ್ದರಂತೆ, ಇವೆಲ್ಲ ಕಾರಣಗಳಿಂದ ಅಲ್ಲಲ್ಲಿ ಆಗಾಗ ಸಣ್ಣವುಟ್ಟ ದಂಗೆ-ದೊಂಬೆಗಳು ಏಳುತ್ತಿದ್ದವು; ಆದರೆ ಅವುಗಳಿಗೆ ಯಾವ ಪ್ರಬಲನಾಯಕರ ಬೆಂಬಲ ಸಿಗದ್ದರಿಂದ ಏಳು ಏಳುವದರಲ್ಲಿಯೇ ಅವು ತಣ್ಣಗಾಗಹತ್ತಿದವು; ಆದರೆ ಡಾಲಹೌಸಿಯು ಹಿಂದುಸ್ತಾನಕ್ಕೆ ಬಂದಂದಿನಿಂದ ಕಂಪನಿಯವರು ಇದುವರೆಗೆ ನಡಿಸಿದುವ ಮುಚ್ಚುಮರೆ ಮತ್ತು ಮೋಸಗಾರಿಕೆಯಿಂದ ರಾಜ್ಯ ಅಪಹರಿಸುವ

ಪದ್ಧತಿಯು ಬದಲಾಗಿ, ಅವನು ಡಾಣ ಡಂಗುರವಾಗಿ, ದೇಶೀಯ ಸಂಸ್ಥಾನಿಕರನ್ನು ರಾಜಕೀಯರಂಗದಿಂದ ಕಿತ್ತೊಗೆಯುವ ದಾಳಿನಡಿಸಿದನು. ಈ ಕಾರಣದಿಂದ ಪೇಶವೆ, ಅಯೋಧ್ಯೆಯ ನವಾಬ, ದಿಲ್ಲಿಯ ಬಾದಶಹ, ರಣಜಿತಸಿಂಗ, ನಾಗಪುರದ ಭೋಸಲೆ ಮುಂತಾದ ದೊಡ್ಡ ದೊಡ್ಡ ಅರಸರ ರಾಜ್ಯಗಳು ಕಂಪನಿಯವರಿಗೆ ತುತ್ತಾದವು ಈ ಗೊಂದಲದಲ್ಲಿ ಬಾಜೀರಾಯನು ತನ್ನ ರಾಜ್ಯವನ್ನೆಲ್ಲ ಕಂಪನಿಯವರಿಗೆ ಒಪ್ಪಿಸಿ, ತಾನು ಬ್ರಹ್ಮಾವರ್ತದ ದಾರಿ ಹಿಡಿದು, ತನ್ನ ಪ್ರಜೆಗಳ ಪಾಲಿಗೆ ಸತ್ತಂತಾದನು. ಅಯೋಧ್ಯೆಯ ನವಾಬನಿಂದ ಅವನ ರಾಜ್ಯದ ಅತ್ಯಂತ ಹುಲುಸಾಗಿರುವ ೨ ಕೋಟಿ ರೂಪಾಯಿ ಕಂದಾಯ ಸಲ್ಲಿಸುವ ಪ್ರದೇಶವನ್ನೆಲ್ಲ ಕಸಿದುಕೊಳ್ಳುವದಲ್ಲದೆ, ಅವನಲ್ಲಿದ್ದ ಬಿದ್ದ ಹಲವು ಕೋಟಿ ರೂಪಾಯಿಗಳನ್ನು ಕಿತ್ತುಕೊಂಡರು. ಅಯೋಧ್ಯೆಯ ಪ್ರಾಂತದಲ್ಲಿಯ ಜಹಗೀರಿಯ ಮತ್ತು ತಾಲೂಕದಾರಿಯ ಹಳ್ಳಿಗಳನ್ನೆಲ್ಲ ತಮ್ಮ ವಶಕ್ಕೆ ತೆಗೆದುಕೊಂಡು, ಜಹಗೀರದಾರ ಮತ್ತು ತಾಲೂಕದಾರರನ್ನು ಅಟ್ಟಿಬಿಟ್ಟರು ಜನಪ್ರಿಯ ಮತ್ತು ಹೆಸರುವಾಸಿಯಾದ ಜಮೀನದಾರನಿಗೆ ಇಲ್ಲದ ಕೆಟ್ಟ ಹೆಸರು ಕೊಟ್ಟು, ಅವನ ಆಸ್ತಿ-ಪಾಸ್ತಿಯನ್ನೆಲ್ಲ ಕಸಿದು ಕೊಂಡರು. ಜಮೀನದಾರರು ರೈತರನ್ನು ಕ್ರೂರವಾಗಿ ನಡಿಸಿಕೊಳ್ಳುವರೆಂದು, ಅವರ ಮುಖಕ್ಕೆ ಮಸಿಬಳಿದರು. ಇದರಂತೆಯೇ ನಾಗಪುರದ ಸ್ಥಿತಿ; ಕಂಪನಿಯವರು ನಾಗಪುರದ ಭೋಸಲೆ ಅರಸನ ಅರಮನೆ ಹೊಕ್ಕು, ಅಲ್ಲಿರುವ ದುಡ್ಡು ದುಗ್ಗಾಣಿಯನ್ನೆಲ್ಲ ದೋಚಿಕೊಂಡರು, ಬೆಳ್ಳಿ-ಬಂಗಾರದ ಒಡವೆಗಳನ್ನು ಪೇಟೆಯಲ್ಲಿ ಮಾರಿದರು. ಒಂದೊಂದು ಆನೆಗಳನ್ನು ನೂರು ನೂರು ರೂಪಾಯಿಗೆ ತೂರಿದರು. ಅರಸನು ಕುಳ್ಳಿರುವ ಬಹುಬೆಲೆಬಾಳುವ ಕುದುರೆಗಳನ್ನು ಐದೈದುರೂಪಾಯಿಗಳಿಗೆಗೆ ಕೊಟ್ಟರು. ಯಾವ ರಾಣಿಯರಮೈ ಮೇಲೆಯೂ ಒಂದು ಕೂಡ ಆಭರಣಗಳು ಉಳಿಯದಂತೆ, ಮುತ್ತು ರತ್ನದ ಒಡವೆಗಳನ್ನೆಲ್ಲ ದೋಚಿಕೊಂಡರು.

## ಸಾಮಾಜಿಕ ಕ್ಷೋಭೆ.

ಮೇಲಿನ ರಾಜಕೀಯ ಕಾರಣಗಳಲ್ಲದೆ, ಹಲಕೆಲವು ಸಾಮಾಜಿಕ ಕಾರಣಗಳೂ ಇದ್ದವು. ಅವುಗಳಲ್ಲಿ ಕಂಪನಿಯವರು ತಮ್ಮ ದೇಶದಿಂದ

ವಿವಿಧ ಸರಕುಗಳನ್ನು ತರಿಸಿ, ಇಲ್ಲಿಯ ನೇಕಾರ, ಕಮ್ಮಾರ, ಬಡಿಗ, ಚರ್ಮ ಕಾರರ ಉದ್ಯೋಗವನ್ನು ಬಹುಮಟ್ಟಿಗೆ ಹಾಳುಗೆಡವಿದರು ತಾಯಿ–ತಂದೆ ಗಳಿಲ್ಲದ ಮಕ್ಕಳನ್ನು ಕ್ರಿಸ್ತಧರ್ಮಕ್ಕೆ ಸೇರಿಸಿಕೊಳ್ಳುವ ಉಪಕ್ರಮನಡಿಸಿದರು. ಆದರಂತೆಯೆ ತನ್ನ ಧರ್ಮ ಬಿಟ್ಟು ಕ್ರಿಸ್ತಿಧರ್ಮವನ್ನು ಸ್ವೀಕರಿಸಿದವರಿಗೆ ಸೈನ್ಯದಲ್ಲಿ ದೊಡ್ಡ ಹುದ್ದೆಯ ಕೆಲಸ ಕೊಡವಾಡಿದರು. ಹಿಂದೂ ಜನ ರಾದ ಸೈನಿಕರನ್ನು ದೇಶ ಬಿಟ್ಟು ವಿದೇಶಕ್ಕೆ ಯುದ್ಧಕ್ಕಾಗಿ ಕಳಿಸಿದರು. ಹೀಗೆ ತನ್ನ ಮನೆ–ಮಾರು ಬಿಟ್ಟು ದೂರ ಹೋಗುವ ಪ್ರಸಂಗ ಬಂದುದ ರಿಂದ ಹಲವರು ಬಹುಮಟ್ಟಿಗೆ ರೇಗಿದರು. ಸೀಪಾಯಿಗಳಿಗೆ ಮೇಲಿನ ಸ್ಥಳಕ್ಕೆ ಏರಿಸುವದಂತೂ ಒತ್ತಟ್ಟಿಗಿರಲಿ; ಅವರಿಗೆ ಸಿಗತಕ್ಕ ಭತ್ತೆಯನ್ನು ಕೂಡ ನಿಲ್ಲಿಸಿಬಿಟ್ಟರು. ಇದರಿಂದ ಅಸಂತುಷ್ಟರಾದ ಸೀಪಾಯರು ಒಗ್ಗ ಟ್ಟಾಗಿ ತಮ್ಮದೊಂದು ಸಂಘಟನೆಮಾಡಿಕೊಂಡರು.

## ನಾನಾಸಾಹೇಬನ ಅಂತರಂಗ.

ನಾನಾಸಾಹೇಬನು ಯಾರ್‍ಯಾರ ಕಣ್ಣಿಗೆ ಹೇಗೇಗೊ ಕಾಣಿಸುತ್ತಿದ್ದರೂ ಅವನ ಅಂತರಂಗವೇ ಬೇರೆಯಾಗಿತ್ತೆನ್ನಬಹುದು ಇಷ್ಟೊಂದು ಅನ್ಯಾಯಾ ಚರಣೆಗಳನ್ನು ತನ್ನ ದೇಶಕ್ಕೆ ಬಂದು ನಡಿಸಿರುವ ಕಂಪನಿಯವರನ್ನೇಕೆ ದೇಶ ದಿಂದ ಓಡಿಸಲಾಗದು ? ಅದಕ್ಕಾಗಿ, ದೇಶದಲ್ಲಿಯ ಎಲ್ಲ ರಾಜರು, ಮಹಾ ರಾಜರು, ವೀರರು, ಸೇನಾನಿಗಳು ಇವರನ್ನೆಲ್ಲ ಕೂಡ ಹಾಕಿ ಏಕೆ ಕಾದಾಡ ಬಾರದು ? ಎಂಬೀ ವ್ಯಾಪಕ ವಿಚಾರವು ನಾನಾಸಾಹೇಬನ ತಲೆಯಲ್ಲಿ ತಾಂಡವವಾಡಲಾರಂಭಿಸಿತು. ಆದಾಗ್ಯೂ, ಅದನ್ನು ಹೊರಗೆ ತೋರಗೊ ಡದೆ, ಅವನು ಇಂಗ್ಲೀಷ ಅಧಿಕಾರಿಗಳೊಡನೆ ಅತ್ಯಂತ ಸೌಹಾರ್ದದಿಂದಲೇ ನಡೆದುಕೊಳ್ಳುವಂತೆ ತೋರಿಸುತ್ತಿದ್ದನು. ಅವನ ಅಂದಿನ ನಡೆಯನ್ನು ನೋಡಿದರೆ, ಯಾರಿಗೂ ಇವನು ಬಂಡುಗಾರನಿರುವನೆಂಬ ಸಂಶಯ ಬರು ವಂತಿರಲಿಲ್ಲ; ಆದರೆ, ಇಂಥ ಪ್ರಶಾಂತವಾದ ವೀರನ ಎದೆಯ ಆಳದಲ್ಲಿ ಇಡಿಯ ಭಾರತವನ್ನೇ ಹೊಡೆದೆಬ್ಬಿಸುವಂಥ ಪ್ರಖರವಾದ ಜ್ಯೋತಿಯು ಹುದುಗಿ, ಉರಿಯುತ್ತಿದ್ದಿತು. ಕಂಪನಿಯ ಧೂರ್ತರಾದ ಅಧಿಕಾರಿ

ಗಳಿಗೆ ನಾನಾಸಾಹೇಬನ ಆಳ ತಿಳಿಯದಿರುವದೊಂದು ಕಟ್ಟಚ್ಚರಿಯೇ? ಇರಲಿ, ತನ್ನ ಮುಂದಿನ ಕರ್ತವ್ಯವೇನೆಂಬದರ ಲೆಖ್ಖಹಾಕಿಕೊಂಡು, ನಾನಾ ಸಾಹೇಬನು ತನ್ನ ಉಚ್ಚ ಕುಲಕ್ಕನುಗುಣವಾಗಿ ಸ್ವರಾಜ್ಯ ಸ್ವಾತಂತ್ರ್ಯಗಳ ಹೋರಾಟದಲ್ಲಿ ತನ್ನ ಪ್ರಾಣಾರ್ಪಣಮಾಡುವ ಪ್ರತಿಜ್ಞೆ ಮಾಡಿದನು. ಮತ್ತು ಈ ರಾಷ್ಟ್ರವ್ಯಾಪಕ ಸಂಗ್ರಾಮವನ್ನು ಹೂಡಲಿಕ್ಕೆ ಪೂರ್ವಸಿದ್ಧತೆ ಎಂದು ಒಂದೊಂದೇ ಕಿಡಿಗಳನ್ನು ಆರಿಸಿ ಶೇಖರಿಸತೊಡಗಿದನು.

## ನಾನಾಸಾಹೇಬನ ಸಹಾಯಕ ಅಜೀಮುಲ್ಲಾಖಾನ.

ದೊಡ್ಡವರು ಸಂಕಲ್ಪ ಮಾಡಿದಂತೆಲ್ಲ ಅವರ ಕಾರ್ಯಕ್ಕೆ ಅನುಕೂಲತೆಗಳನ್ನು ದೇವರೇ ಒದಗಿಸುವನು; ಎಂಬುವ ಮಾತು ಸುಳ್ಳಲ್ಲ. ನಾನಾ ಸಾಹೇಬನು ತನ್ನ ಮನದ ಸಂಕಲ್ಪಗಳನ್ನು ಹೀಗೆ ಕಾರ್ಯಕ್ಕೆ ಇಳಿಸಬೇಕೆಂಬುವ ವಿಚಾರದಲ್ಲಿರುವಾಗಲೇ ಒಂದು ದಿನ ಅವನಿಗೊಂದು ಮಹಾ ವ್ಯಕ್ತಿಯ ಪರಿಚಯವಾಯಿತು ಆ ವ್ಯಕ್ತಿಯೇ ಅಜೀಮುಲ್ಲಾಖಾನ. ಇವನೊಬ್ಬ ಬಡವ. ಹೊಟ್ಟೆಹೊರಕೊಳ್ಳಲು ಒಬ್ಬ ಇಂಗ್ಲೀಷ ಅಧಿಕಾರಿಯ ಮನೆಯಲ್ಲಿ ಸೇವಕನೆಂದು ಕೆಲಸ ಮಾಡುತ್ತಿರುವಾಗಲೇ ತನ್ನ ಬುದ್ಧಿಬಲದಿಂದ ಹರಕು-ಮುರುಕು ಇಂಗ್ಲೀಷ ಭಾಷೆಯನ್ನು ಕಲಿತುಕೊಂಡನು ಇವನು ಚುರುಕು ಬುದ್ಧಿಯವನಾದುದರಿಂದ, ಚನ್ನಾಗಿ ಇಂಗ್ಲೀಷ ಕಲಿಯುವ ಅಪೇಕ್ಷೆಯಿಂದ ಕಾನಪುರ ಇಂಗ್ಲೀಷ ಶಾಲೆಯಲ್ಲಿ ಇಂಗ್ಲೀಷ ಕಲಿತು, ಅದೇ ಶಾಲೆಯಲ್ಲಿ ಶಿಕ್ಷಕನಾದನು. ದೇಹದಿಂದ ದೃಢಕಾಯ, ಬಣ್ಣದಿಂದ ಕೆಂಪಗೆ, ಕಣ್ಣುಮೂಗುಗಳಿಂದ ಯಾರ ಕಣ್ಣೊಳಗಾದರೂ ತುಂಬುವಷ್ಟು ಚಲುವನಿರುವಮೂಲಕ, ಅವನನ್ನು ನೋಡಿದರೆ, ಯಾರಿಗಾದರೂ ಅವನ ಬಗ್ಗೆ ಪ್ರೀತಿವಿಶ್ವಾಸಗಳು ಹುಟ್ಟುತ್ತಿದ್ದವು. ಕೆಲಸದ ಮಟ್ಟಿಗೆ ಫ್ರೆಂಚ ಭಾಷೆಯ ಜ್ಞಾನವಿದ್ದು, ಮಾತಾಡಲಿಕ್ಕೆ ಬರುತ್ತಿತ್ತು. ಇಂಥವನೊಬ್ಬನ ಪರಿಚಯವಾಗಿ ಅದು ದಿನದಿನಕ್ಕೆ ಬೆಳೆಯತೊಡಗಿ, ಮುಂದಿವನು ನಾನಾ ಸಾಹೇಬರಿಗೆ ಅತ್ಯಂತ ನಂಬಿಗೆಯ ಗೆಳೆಯನಾದನು ಇವನನ್ನು ಕೇಳದೆ ನಾನಾಸಾಹೇಬನು ಯಾವ ಕಾರ್ಯಗಳನ್ನೂ ಮಾಡುತ್ತಿರಲಿಲ್ಲ.

# ನಾನಾಸಾಹೇಬನ ಪ್ರತಿನಿಧಿಯಾಗಿ ಇಂಗ್ಲಂಡಕ್ಕೆ.

ಆದಾಗ, ಸಾತಾರೆಯ ಅರಸನ ಪರವಾಗಿ ರಂಗೋ ಬಾಪೂಜಿ ಎಂಬ ಬ್ರಾಹ್ಮಣನು ಕೋರ್ಟ ಆಫ್ ಡಾಯರೆಕ್ಟರ್ಸ ಮುಂದೆ ಸಾತಾರೆಯ ಅರಸನ ಗೋಳನ್ನು ಮಂಡಿಸಲು ಕಳಿಸಲ್ಪಟ್ಟಿದ್ದನು. ಆದರಂತೆ, ನಾನಾಸಾಹೇಬನೂ ತನ್ನ ಗೋಳನ್ನು ಅವರ ಮುಂದೆ ಇರಿಸಲು ಯಾರನ್ನಾದರೂ ಕಳಿಸುವ ಯೋಚನೆಯಲ್ಲಿದ್ದನು. ಇಷ್ಟರಲ್ಲಿ ಅಜೀಮುಲ್ಲಾನ ಪರಿಚಯವಾಯಿತು. ಹಿಂದೆ ಹೇಳಿರುವಂತೆ ಅಜೀಮುಲ್ಲಾನಿಗೆ ಇಂಗ್ಲೀಷ ಮತ್ತು ಫ್ರೆಂಚ ಭಾಷೆಗಳಲ್ಲಿ ಜ್ಞಾನ ಚನ್ನಾಗಿದ್ದು, ಮಾತುಗಾರಿಕೆ ಮತ್ತು ಮಾತಾಡುವ ರೀತಿ ನೀತಿಗಳಲ್ಲಿಯೂ ಅವನು ಬಲ್ಲಿದನಿದ್ದುದರಿಂದ, ಬಾಜೀರಾಯನು ಅವನನ್ನು ಇಂಗ್ಲಂಡಕ್ಕೆ ತನ್ನ ಸಂಬಂಧವಾದ ಕಾಗದ ಪತ್ರಗಳನ್ನು ಕೊಟ್ಟು ಕಳಿಸಿದನು. ಅವನು ಇಂಗ್ಲಂಡಕ್ಕೆ ಹೋಗಿ, ಅಲ್ಲಿಯ ಅಧಿಕಾರಿ ಮತ್ತು ದೊಡ್ಡದೊಡ್ಡ ವಕೀಲರನ್ನು ಕಂಡು, ಬಾಜೀರಾಯನ ದೂರನ್ನು ಅವರಮುಂದೆ ಮಂಡಿಸಿದನು ಆದರೆ, ಅವನನ್ನು ಯಾರೂ ಹಚ್ಚಿಕೊಳ್ಳಲಿಲ್ಲ. ಮತ್ತು ಕಂಪನಿಯ ಡಾಯರೆಕ್ಟರರು ತನ್ನ ತಂದೆಯ ವಾರ್ಷಿಕ ಉಂಬಳಿಯನ್ನು ಬೇಡುವ ಹಕ್ಕು ನಾನಾಸಾಹೇಬನಿಗೆ ಇಲ್ಲವೆಂದು ಹಿಂದುಸ್ಥಾನ ಸರಕಾರದವರು ಹೇಳಿದ ಮಾತನ್ನೇ ಅವರು ಬೆಂಬಲಿಸಿದರು. ಇದರಿಂದ ಅಜೀಮುಲ್ಲಾನು ಬಹುಮಟ್ಟಿಗೆ ನಿರಾಶೆಗೊಂಡನು. ಆದರೆ ಇದಕ್ಕೆ ಮುಂದೇನು ಉಪಾಯ ಎಂಬುವ ವಿಚಾರವು ಅವನ ಮನದ ಆಳದಲ್ಲಿ ಕೊರೆಯಹತ್ತಿತು. ಆ ಕಾಲಕ್ಕೆ ವಿಲಾಯತಿಯಲ್ಲಿದ್ದ ರಂಗೋ ಬಾಪೂಜಿಯನ್ನು ಅವನು ಕಂಡು, ಮುಂದಿನ ಕಾರ್ಯದ ಯೋಚನೆ ಮಾಡಿಕೊಂಡನು. ಅಜೀಮುಲ್ಲಾ ಮಹಾ ತಂತ್ರಗಾರ, ಮತ್ತು ಸಾಹಸಿ. ಅಷ್ಟಿಷ್ಟು ನೀರಿನಲ್ಲಿ ಮುಳುಗುವವನಲ್ಲ. ಆದ್ದರಿಂದ, ಇಂಗ್ಲಂಡದಲ್ಲಿರುವಾಗಲೇ ಇಂಗ್ಲೀಷರ ಸ್ಥಿತಿಗತಿ, ಅವರ ಶಕ್ತಿ ಮುಂತಾದವುಗಳನ್ನು ಸೂಕ್ಷ್ಮವಾಗಿ ನೋಡಿಕೊಂಡನು; ಆಗ ಅವನ ಮನಸಿನಲ್ಲಿ ಮತ್ತೊಂದು ಪ್ರಬಲವಾದ ಆಶಾಕಿರಣವು ಹೊಳೆಯಿತು. "ನಮ್ಮ ಬಯಕೆಯನ್ನು ಈಡೇರಿಸಿಕೊಳ್ಳಲು ನಾವು ಪರರ ಕೈ ಕಾಯುವದೇಕೆ? ನಾವೇ ಅದಕ್ಕಾಗಿ ಪ್ರಯತ್ನ ಪಡಬಾರದೇ? ಇದಕ್ಕಾಗಿ, ನಮ್ಮ ಜನ

ರನ್ನೇ ಬಡಿದೆಬ್ಬಿಸುವದು ಅವಶ್ಯ" ಎಂಬೀ ವಿಚಾರಗಳಿಂದ ಸ್ಫೂರ್ತಿಗೊಂಡವನಾಗಿ, ಇರಾಣ--ಅಫಗಾಣಿಸ್ಥಾನ-ತುರ್ಕಸ್ಥಾನ-ರಸಿಯಾಗಳಲ್ಲಿ ಅಡ್ಡಾಡಿ ಸ್ವದೇಶಕ್ಕೆ ತಲುಪಿದನು.

## ಬ್ರಹ್ಮಾವರ್ತದಲ್ಲಿ ಗುಪ್ತಿನ ಕಾರ್ಯಗಳು.

ನಾನಾಸಾಹೇಬನಿಗೂ ಕಂಪನಿಯವರ ವಿಷಯದಲ್ಲಿ ಹೆಚ್ಚೆಚ್ಚು ಮನಸು ಕೆಡಹತ್ತಿತು. ಅಜೀಮುಲ್ಲಾ ಬಂದು ಹೇಳಿದ ಮಾತುಗಳಿಂದಂತೂ ಅವನೆದೆಯಲ್ಲಿ ಇನ್ನಷ್ಟು ದ್ವೇಷದ ಉರಿ ಹೊತ್ತಲಾರಂಭಿಸಿತು, ಗಾಯಗೊಂಡ ಹುಲಿಯಂತೆ ಅವನ ಸ್ಥಿತಿ; ತನ್ನ ಮನಸಿನಲ್ಲಿದ್ದ ಉರಿಯನ್ನು ದೇಶದಲ್ಲೆಲ್ಲ ಹಬ್ಬಿಸಿ, ಅದರ ಜ್ವಾಲೆಯಲ್ಲಿ ಪರರಾಯರ ಬೀಜಗಳನ್ನೆಲ್ಲ ಹುರಿದು, ಸ್ವರಾಜ್ಯ ಕಟ್ಟಬೇಕೆಂಬ ಉನ್ನತಾಕಾಂಕ್ಷೆ. ಅದೇ ದೃಷ್ಟಿಯಿಂದ ಬ್ರಹ್ಮಾವರ್ತದ ಅರಮನೆಯಲ್ಲಿ ಗುಪ್ತಿನ ಮಾತು-ಕತೆಗಳು ನಡೆದವು. ೧೮೫೬ ರಿಂದಲೇ ನಾನಾಸಾಹೇಬನು ಬ್ರಹ್ಮಾವರ್ತದಿಂದ ಭಾರತದೊಳಗಿನ ಎಲ್ಲ ನೊಂದ-ಬೆಂದ ರಾಜರಿಗೆ ತನ್ನ ರಾಜಕೀಯ ವಿಚಾರಗಳನ್ನು ತಿಳಿಸಲು ಗುಪ್ತಾಗಿ ಜನರನ್ನು ಕಳಿಸತೊಡಗಿದನು. ಈ ಮಹತ್ವದ ಕಾರ್ಯಕ್ಕಾಗಿ ಅವನು ಅನುಭವಿಕರೂ, ಸಮರ್ಥರೂ ಆದವರನ್ನು ಯೋಜನೆ ಮಾಡಿದ್ದನು. ಅವರು ದಿಲ್ಲಿಯಿಂದ ಮೈಸೂರಿನ ವರೆಗೆ ಸಂಚರಿಸಿ, ಕಂಪನಿಯವರು ಮಕ್ಕಳಿಲ್ಲದ ನೆವದಿಂದ ದೇಶೀಯ ಸಂಸ್ಥಾನಗಳನ್ನೆಲ್ಲ ತಮ್ಮ ಕೈಯಲ್ಲಿ ತೆಗೆದುಕೊಳ್ಳಲು ಹೊಂಚುಹಾಕಿ; ದೇಶವನ್ನೆಲ್ಲ ನಿರ್ವೀರ್ಯಗೊಳಿಸುವ ಪ್ರಯತ್ನದಲ್ಲಿರುವರೆಂಬುದನ್ನು ಮನದಟ್ಟಾಗುವಂತೆ ತಿಳಿಸಿ, ನಾನಾ ಸಾಹೇಬನು ಎಬ್ಬಿಸಬೇಕೆಂದಿರುವ ಬಂಡಾಯ ಅಥವಾ ಸ್ವಾತಂತ್ರ್ಯ ಸಂಗರದೊಳಗೆ ಎಲ್ಲರೂ ಸೇರಬೇಕೆಂದು ಕೇಳಿಕೊಳ್ಳುತ್ತಿದ್ದರು. ಈ ಬಗ್ಗೆ ಅವನು ಮೈಸೂರಿಗೆ ಕಳಿಸಿದ ಒಬ್ಬೊಬ್ಬ ದೂತರು ಇಂಗ್ಲೀಷರ ಕೈಗೆ ಸಿಕ್ಕರು. ಅವರ ಹೇಳಿಕೆಯಂತೆ ನೋಡಿದರೆ, ಪ್ರಾರಂಭಕ್ಕೆ ನಾನಾಸಾಹೇಬನ ಮಾತಿಗೆ ಯಾರೂ ಅಷ್ಟೊಂದು ಗಮನಕೊಟ್ಟಿರಲಿಲ್ಲ. ಅಯೋಧ್ಯೆಯ ನವಾಬನ ರಾಜ್ಯವನ್ನು ಕಂಪನಿಯವರು ಕಸಿದುಕೊಂಡು, ತಮ್ಮ ರಾಜ್ಯಕ್ಕೆ ಸೇರಿಸಿಕೊಂಡಂದಿನಿಂದ, ನಾನಾಸಾಹೇ

ಬನ ಮಾತಿಗೆ ಬೆಲೆಬಂದಿತು. ಅವನನ್ನುವಮಾತು ನಿಜವೆಂದು ಆಗ ಸೀಪಾಯರು ತಂತಮ್ಮೊಳಗೆ ಮಾತಾಡಿಕೊಂಡು, ಒಂದುಗೂಡಲು ಮೊದಲು ಮಾಡಿದರು; ಅವರಿಗೆ ಅಯೋಗ್ಯ್ಯೆಯು ಸರಕಾರವು ನೆರವಾಗಹತ್ತಿತು, ಆಗ ನೂರಾರು ಜನ ಸೀಪಾಯರು ಧೈರ್ಯದಿಂದ ಮುಂದರಿದು ನಾನಾಸಾಹೇಬನ ಕಾರ್ಯವನ್ನು ಎತ್ತಿಹಿಡಿದರು.

## ನಾನಾಸಾಹೇಬನ ದೂತರು (ಸಂಚುಗಾರರು).

ಸ್ವಾತಂತ್ರ್ಯಯುದ್ಧದ ಬೀಜಗಳನ್ನು ಬಿತ್ತುತ್ತ ಈ ಮೇರೆಗೆ ದಿಲ್ಲಿಯಿಂದ ಮೈಸೂರು ವರೆಗಿನ ಸಂಸ್ಥಾನಗಳಲ್ಲಿ ಅಡ್ಡಾಡಿ, ಸ್ವಾತಂತ್ರ್ಯ ಸಿದ್ಧತೆಯ ಸಂದೇಶವನ್ನು ಸಾರುತ್ತಿರುವಾಗ ಈ ಬೀಜಗಳು ದಿಲ್ಲಿಯಲ್ಲಿಯೇ ಹೆಚ್ಚಾಗಿ ಬೇರು ಬಿಟ್ಟವು. ಕಂಪನಿಯವರು ದಿಲ್ಲಿಯ ಬಾದಶಹನನ್ನು ಪಟ್ಟದಿಂದ ತಳ್ಳುವ ಹವಣಿಕೆಯಲ್ಲಿದ್ದರು. ಬಾಡಶಹ (ಎರಡನೇ ಬಹಾದ್ದೂರಶಹ)ನನ್ನು ತೀರ ಕೀಳಮಟ್ಟಕ್ಕೆ ಇಳಿಸಿದ್ದರು. ಅವನಿಗಿಂತ ಅವಮಾನಗಳು ಅವನಿಗಿಂತಲೂ ಸ್ವಾಭಿಮಾನಿಯಾದ ಅವನ ಹೆಂಡತಿ ಝೀನ್ನತ್‌ಮಹಾಲಳ ಎದೆಯಲ್ಲಿ ಅಖಂಡವಾಗಿ ಚುಚ್ಚುತ್ತಿದ್ದವು. ಆಕೆ ಬಲು ಚತುರೆ ಮತ್ತು ನಿಶ್ಚಯದ ಸ್ವಭಾವದವಳಿದ್ದುದರಿಂದ, ಕಳಕೊಂಡಿರುವ ಬಾದಶಹಪದವನ್ನು ತಿರುಗಿ ದೊರಕಿಸಲು ಕೊನೆಯದೊಂದು ಪ್ರಯತ್ನ ಮಾಡಿಯೇಬಿಡಬೇಕೆಂದು ಮನ ವಾರೆ ಹಾತೊರೆಯುತ್ತಿದ್ದಳು, ಮತ್ತು ಇಂಥ ಯತ್ನದಲ್ಲಿ ಸಾವು ಬಂದರೂ, ಅದು ಸಾವಲ್ಲ ಎಂಬುವ ಮಟ್ಟಿಗೆ ಆಕೆಯ ಅಭಿಪ್ರಾಯವಿತ್ತು. ನಾನಾಸಾಹೇಬನು ಎಲ್ಲ ಅರಸರನ್ನು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲುಗಾರರಾಗಲು ಹುರಿದುಂಬಿಸಿದ್ದನಲ್ಲದೆ, ಆಯಾ ಅರಸರ ನೆರವಿನಿಂದ ಕೆಳತರಗತಿಯ ಜನ ಸಾಮಾನ್ಯರಲ್ಲಿ ಕಂಪನಿಯವರ ಬಗ್ಗೆ ತಿರಸ್ಕಾರ ಹುಟ್ಟಿಸಲು ಫಕೀರರನ್ನೂ, ಸನ್ಯಾಸಿಗಳನ್ನೂ, ಪಂಡಿತರನ್ನೂ ಬೇರೆ ಬೇರೆಕಡೆಗೆ ಕಳುಹಿದನು. ಅಲ್ಲದೆ, ಅವರ ಹಿಂದಿಂದೇ ಸ್ವದೇಶ, ಸ್ವಧರ್ಮಕ್ಕಾಗಿ ದೇಹತೆತ್ತಿ, ದೇಶವನ್ನು ಸ್ವತಂತ್ರಗೊಳಿಸುವ ಕಾರ್ಯಕ್ಕಾಗಿ ಸಾವಿರಾರು ಜನರಿಗೆ ಹಣ ಕೊಟ್ಟು ಮನೆಮನೆಗೆ ಭಿಕ್ಷುಕರವೇಷದಿಂದ ಹೋಗಿ, ಸ್ವಾತಂತ್ರ್ಯದ ಸಂದೇಶ ಮುಟ್ಟಿಸಲು ಏರ್ಪಡಿಸಿದನು.

# ಸ್ವಾತಂತ್ರ್ಯ ಸಂಗ್ರಾಮದ ಸಂಘಟನೆ.

ಅಲ್ಲಲ್ಲಿಯ ದಂಡಿನಲ್ಲಿಯ ಸಿಪಾಯರಲ್ಲಿ ಈ ಸಂಗ್ರಾಮದ ಸಿದ್ಧತೆ ಮತ್ತು ಸಂಘಟನೆಯನ್ನು ನಡಿಸುವ ಕಾರ್ಯವು ಬಹು ಗುಟ್ಟಿನಿಂದ ನಡೆದಿತ್ತು. ಇಂಗ್ಲೀಷರಂತಹ ಧೂರ್ತ ಮತ್ತು ಚತುರ ಜನರಿಗೆ ಇದರ ಸುಳಿವು ಸಹ ಹತ್ತಲಿಲ್ಲ. ಈ ಬಗ್ಗೆ ಟ್ರಿವಿಲಿಯನ್ನ ಎಂಬ ಒಬ್ಬ ಇಂಗ್ಲೀಷ ಗ್ರಂಥಕಾರನು "ಈ ಜನರು ಮಾಡಿಕೊಂಡಿರುವಷ್ಟು ಪೂರ್ಣ ಸಂಘಟನೆಯು ಯಾವ ಜನರಿಗೂ ಸಾಧ್ಯವಿರಲಿಲ್ಲ" ಎಂದು ನುಡಿದಿರುವನು. ಸನ್ಯಾಸಿಯಾಗಲಿ, ಫಕೀರನಾಗಲಿ, ಯಾವುದೊಂದು ಹಳ್ಳಿಗೆ ಹೋದರಾಯಿತು. ಆವನ ಸುತ್ತು ಎಲ್ಲ ಜನರು ಮುತ್ತುವರು. ಆದರಿಂದ ದೊಡ್ಡದೊಂದು ಆಲ್ಲೋಲಕಲ್ಲೋಲವೇ ಏಳುವದು. ಅಲ್ಲಲ್ಲಿ ಜನರು ಪಿಸುಮಾತಾಡುವದಕ್ಕೆ ಮೊದಲಾಗುತ್ತಿತ್ತು. ಇಂಗ್ಲೀಷರಿಗೂ ಇವೆಲ್ಲವುಗಳಮೇಲಿಂದ ಏನೋ ಒಂದು ಗುಪ್ತಗೊಂದಲ ನಡೆದಿದೆ ಎಂಬುವ ಸಂಶಯು ಬಂದರೂ, ಅದು ಇಷ್ಟೊಂದು ಭೀಕರವಾದ ರಾಜಕೀಯ ಸಂಗರ ವಿರಬಹುದೆಂಬುದು ಗೊತ್ತಾಗಲಿಲ್ಲ. ಈ ತಿರುಗುವ ಭಿಕ್ಷುಗಳು ಎಷ್ಟೋ ಸಾರೆ ದಂಡಿನವರು ಇರುವ ಪ್ರದೇಶದಲ್ಲೆಲ್ಲ ಆಡ್ಡಾಡುವರು. ಕಲಕತ್ತೆಯ ಹತ್ತರ ಇರುವ ಬರಾಕಪುರದಿಂದ ಮೀರತ, ಅಂಬಾಲಾ, ಪೇಶಾವರಗಳಲ್ಲಿ ಇದರ ಗುಪ್ತಸಂಘಗಳು ಸ್ಥಾಪಿಸಲ್ಪಟ್ಟಿದ್ದು ಕೆಲಕೆಲ ವೇಳೆಯಲ್ಲಿ ಗೊಂದಲ ಏಳುವ ಲಕ್ಷಣಗಳು ಕಂಡರೂ, ಮಾತಾಡಿದರೆ ಏನಾಗುವದೋ ಎಂದು ಕಂಪನಿಯವರು ಬಾಯಿಮುಚ್ಚಿಕೊಂಡಿದ್ದರು. ಈ ಸಂಚಾರಿ ಜನರು ಎಷ್ಟೋಸಾರೆ ಆನೆಗಳಮೇಲೆ ಪ್ರವಾಸ ಮಾಡುತ್ತಿದ್ದರು. ದೇವಾಲಯುಗಳಲ್ಲಿ ಮಸೀದೆಗಳಲ್ಲಿ ಕ್ಷೇತ್ರಗಳಲ್ಲಿಕೂಡ ಇದರ ಗುಪ್ತ ಚಟುವಟಿಕೆಗಳು ಸಾಗಿ, ಭಿನ್ನ ಭಿನ್ನ ಜಾತಿಯವರು ತಮ್ಮ ತಮ್ಮ ಜಾತಿಗೆ ಆನುಸರಿಸಿ, ಪ್ರಾರ್ಥನೆ ಆರಾಧನೆಗಳನ್ನು ನಡೆಸಿದ್ದರು ಗೊಂಬೆಯಾಟದವರು, ದುರ್ಗಮುರ್ಗಿಯವರು, ಲಾವಣಿಯವರು, ದೊಡ್ಡಾಟದವರು, ಮೊದಲುಗೊಂಡು ಎಲ್ಲರೂ ಈ ಸಂಗರದ ಸಂದೇಶವನ್ನು ತಂತಮ್ಮ ರೀತಿಯಲ್ಲಿ ಜನರ ಮನಸನ್ನು ಕೆರಳಿಸುವಂತೆ ಗೂಢವಾಗಿ ಹೇಳುವರು. ಇವನ್ನೆಲ್ಲ ಕೇಳಿ, ನೋಡಿ, ಜನರ ವೃತ್ತಿಯಲ್ಲಿಯ ನೆತ್ತರ ಉಕ್ಕಹತ್ತುವದು. ಬುಡು

ಬುಡಿಕೆಯುವರು, ಕೈ ನೋಡುವವರು, ಕಂಪನಿಯುವರ ವಿನಾಶಕಾಲ ಸಮೀಪಿಸಿರುವದನ್ನು ಹೇಳಿ, ಪರರಾಯರನ್ನು ಓಡಿಸಲು, ಬಂಡಾಯ ಹೂಡುವದೇ ಮುಖ್ಯಉಪಾಯವೆಂದು ಎಲ್ಲರೂ ಪವಿತ್ರಕಾರ್ಯದಲ್ಲಿ ಸಹಕರಿಸಬೇಕೆಂದು ಬೋಧಿಸುವರು. ಈ ಮೇರೆಗೆ ನಾಟಕ-ತಮಾಷೆಗಳಿಂದ ಮೊದಲು ಮಾಡಿ, ತೀರ್ಥ–ಕ್ಷೇತ್ರ, ಜಾತ್ರೆ–ಉತ್ಸವ, ಮನೆ–ಮಠ, ಪೇಟೆ–ಬೀದಿ, ಕುಳಿತಲ್ಲಿ–ನಿಂತಲ್ಲಿ, ಹೆಂಗಸರಿಗೂ, ಗಂಡಸರಿಗೂ, ಕೂಡಿಯೇ ಎಲ್ಲರೂ ಎಲ್ಲರನ್ನು ಬಂಡಾಯಕ್ಕೆ ಹುರಿಗೊಳಿಸುತ್ತಿದ್ದರು. “ಧರ್ಮ ಮುಳುಗುತ್ತಿದೆ, ದೇಶವು ಹಾಳಾಗುತ್ತಿದೆ, ಜನರ ಬಾಳು ನಾಯಿಗೂ ಕೀಳಾಗಿದೆ” ಎಂಬೀ ವಾಕ್ಯಗಳು ಸಂಚುಗಾರರ ಪ್ರಯತ್ನದಿಂದ ಕಲಕತ್ತೆಯ ಹತ್ತರ ಇರುವ ಬರಾಕಪುರದಿಂದ, ಅಂಬಾಲಾ, ಪೇಶಾವರ, ಮಿರತಗಳಲ್ಲಿರುವ ದಂಡಿನ ನಿಲ್ದಾಣಗಳಲ್ಲಿ ಕೂಡ ಕಂಪನಿಯುವರ ವಿರುದ್ಧವಾಗಿ ಹೋರಾಡಲು ಸಿಪಾಯರ ಗುಪ್ತಸಂಘಗಳು ಸ್ಥಾಪಿಸಲ್ಪಟ್ಟವು. ಒಟ್ಟಾರೆ, ಕಂಪನಿಯುವರಿಂದ ಆ ಕಾಲಕ್ಕೆ ಅನ್ಯಾಯದ ಘಟನೆಗಳು ನಡೆದಂತೆಲ್ಲ ಜನರಲ್ಲಿ ದೇಶ-ಧರ್ಮದ ಬಗೆಗೆ ಜಾಗೃತಿಯು ಬಲಿಯಹತ್ತಿತು. ಗುಡಿ-ಗುಂಡಾರ, ಧರ್ಮಶಾಲೆ, ತೀರ್ಥ-ಕ್ಷೇತ್ರ, ಜಾತ್ರೆ-ಉತ್ಸವ, ಮನೆ-ಮಠ, ನಾಟಕ-ತಮಾಶೆ, ಹೆಂಗಸರು, ಗಂಡಸರು ಇವರಲ್ಲೆಲ್ಲ ಅಸಂತೋಷದ ಉರಿಯು ಉರಿಯುತ್ತಿದ್ದುದನ್ನು ನೋಡಬಹುದಾಗಿತ್ತು. “ನಮ್ಮ ಧರ್ಮ ಮುಳುಗುತ್ತಿದೆ, ದೇಶ ಹಾಳಾಗುತ್ತಿದೆ, ನಮ್ಮ ಜನರ ಪಾಡು ನಾಯಿಗೂ ಕೀಳಾಗಿದೆ” ಎಂಬೀ ನುಡಿಯನ್ನು ಕೇಳಿದರಂತೂ ಜನರಲ್ಲಿ ದೇಶ ಮತ್ತು ಧರ್ಮಕ್ಕಾಗಿ ಏನುಮಾಡಲಿ, ಏನುಬಿಡಲಿ ಎಂಬುವ ಸ್ಫೂರ್ತಿಹುಟ್ಟಿ, ಅವರ ಮೈಯಲ್ಲಿಯ ನೆತ್ತರವು ಸಳಮಳ ಕುದಿಯುತ್ತಿತ್ತು. ದಿಲ್ಲಿಯ ಬಾದಶಹನ ಓಲಗದಲ್ಲಿರುವ ಒಬ್ಬ ಕವಿಯು ಒಂದು ರಾಷ್ಟ್ರಗೀತವನ್ನು ರಚಿಸಿದ್ದನು. ಆ ಕವಿತೆಯಲ್ಲಿ ಹಿಂದುಸ್ಥಾನದ ಪೂರ್ವ ವೈಭವವನ್ನು ಮತ್ತು ಅಂದಿನ ಹೀನ–ದೀನ ಸ್ಥಿತಿಯನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸಲ್ಪಟ್ಟಿದ್ದು, ಅದನ್ನು ಎಲ್ಲ ಸಾರ್ವಜನಿಕ ಕಾರ್ಯಗಳು ಜರಗುವ ಕಾಲಕ್ಕೆ ಅನ್ನಬೇಕೆಂದು ಬಾದಶಹನು ಆಜ್ಞೆಮಾಡಿದ್ದನು. ಇದರಲ್ಲಿಯೇ ‘ಕಂಪನಿಯುವರ ರಾಜ್ಯವು ಒಂದು ನೂರು ವರ್ಷ ಮಾತ್ರ’

ಎಂದು ಯಾವನೋ ಹೂಲಿ ಎಬ್ಬಿಸಿದನು. ಈ ಹೂಲಿಗೆ ಅನುಸಾರವಾಗಿ, ಮರುವರ್ಷಕ್ಕೆ ೧೭೫೭ ನೇ ಇಸ್ವಿಯಲ್ಲಾದ ಪ್ಲಾಸಿಯ ಕಾಳಗವಾಗಿ ನೂರು ವರ್ಷಗಳಾಗುತ್ತಿದ್ದವು. ಈ ಕಲ್ಪನೆಯು ಜನರಲ್ಲಿ ಇನ್ನಷ್ಟು ಆಸೆಯನ್ನು ಬೆಳಗಿಸಿತು.

## ಉರಿಯಲ್ಲಿ ಎಣ್ಣೆ.

ಈ ಮೇರೆಗೆ ಇಡಿಯ ದೇಶದಲ್ಲಿಯೇ ಸ್ವಾತಂತ್ರ್ಯಸಂಗರದ ವಿಚಾರಗಳು ಉದ್ದೀಪಿತವಾಗುತ್ತಿರಲು, ಆಕಳ ಮತ್ತು ಹಂದಿಯ ನೆಣ ಹಚ್ಚಿರುವ ತುಬಾಕಿಗಳನ್ನು ಹಿಂದೂ–ಮುಸಲ್ಮಾನ ಸೀಪಾಯರಿಗೆ ಕೊಟ್ಟಿರುವ ಬಗೆಗೆ ಗಲಭೆ ಎದ್ದಿತು. ಇದರಿಂದಂತೂ ಮೊದಲೇ ಉರಿಯುವದರಲ್ಲಿ ಎಣ್ಣೆಯನ್ನು ಉಗ್ಗಿದಂತಾಯಿತು ತಲೆತಲಾಂತರಗಳಿಂದ ನಡೆದುಬಂದಿರುವ ಧರ್ಮದ ವಿಚಾರಗಳು ಆಗ ಇನ್ನೂ ತೀವ್ರವಾಗಿದ್ದವು. ಆಗಿನವರು ಧರ್ಮವು ಪ್ರಾಣಕ್ಕೆ ಸಮವೆಂದು ಬಗೆಯುತ್ತಿದ್ದರು. ಇಂಥ ಸೂಕ್ಷ್ಮ ಸಮಯದಲ್ಲಿ ಕಂಪನಿಯವರಿಗೆ ತುಬಾಕಿಯಲ್ಲಿ ಈ ಬಗೆಯ ಸುಧಾರಣೆ ಮಾಡುವ ಬುದ್ಧಿ ಹುಟ್ಟಿದ್ದೊಂದು ವಿಲಕ್ಷಣ ಘಟನೆಯೇ ಸರಿ. ಇದರಿಂದ ಸೀಪಾಯರ ಮನಸ್ಸು ಕೆರಳಿತು. ಎಲ್ಲರೂ ತಮ್ಮ ತಮ್ಮ ಧರ್ಮಕ್ಕಾಗಿ ಹೋರಾಡಲು ನಿಶ್ಚಯಿಸಿದರು ಹಿಂದುಗಳು ಗಂಗೆಯನ್ನೂ ತುಳಸಿಯನ್ನೂ, ಮುಸಲ್ಮಾನರು ಕುರಾನವನ್ನೂ ಕೈಯಲ್ಲಿ ಹಿಡಿದು, ಆಣೆಯಿಟ್ಟುಕೊಂಡರು. ದಂಡಿನ ಠಾಣ್ಯಗಳಿಂದ ಠಾಣ್ಯಗಳಿಗೆ ಸಾವಿರಾರು ಪತ್ರ–ಕಾಗದಗಳು, ಓಡಾಡುತ್ತಿದ್ದವು. ಅಲ್ಲಲ್ಲಿಯ ಸೈನ್ಯ ಠಾಣ್ಯಗಳ ಹಿಂದೂ–ಮುಸಲ್ಮಾನ ಅಧಿಕಾರಿಗಳು ತಮ್ಮ ತಮ್ಮೊಳಗೆ ಪತ್ರವ್ಯವಹಾರ ನಡಿಸಿ, ತಮ್ಮ ತಮ್ಮ ಸೀಪಾಯಿಗಳ ಅಭಿಪ್ರಾಯ ಕೇಳಿ, ೧೮೫೭ ಮೇ ತಿಂಗಳ ೩೧ ನೇ ದಿನಾಂಕದಲ್ಲಿ ಎಲ್ಲರೂ ಒಂದೇ ಕಾಲಕ್ಕೆ ದಂಗೆ ಎಬ್ಬಿಸಬೇಕೆಂದು ನಿರ್ಣಯವಾಗಿತ್ತು. ಅದರಂತೆ, ಆಯಾ ಸ್ಥಳಗಳಲ್ಲಿಯ ಬಂಡಾಯದ ಗುಪ್ತ ಸಂಚಾಲಕರು ತಮ್ಮ ಕೈಯಲ್ಲಿ "ಕೆಂಪು ಕಮಲ ಹೂ" ವನ್ನು ಹಿಡಿದು, ಅದನ್ನು ಸೀಪಾಯಿಂದ ಸೀಪಾಯಿಗೆ ಮುಟ್ಟಿಸುವಂತೆ ಏರ್ಪಡಿಸಿದರು. ಈ ಕಮಲ ಹೂ ವೆಂದರೆ, ಅದೊಂದು ದೊಂಬೆಯ ಚಿನ್ಹ. ಬಾಯಿಂದ ಚಾ-ಚೂ ಎಂಬ ಶಬ್ದಗಳನ್ನು

ಕೂಡ ನುಡಿಯದೆ, ಮೌನವಾಗಿ ಕೈಯಿಂದ ಕೈಗೆ ಓಡಾಡುವ ಆ ಕಮಲ ಹೂವು ಪ್ರತಿಯೊಬ್ಬರ ಮನಸಿನಲ್ಲಿ ಬಗೆಬಗೆಯ ವಿಚಾರಗಳ ಸಂತೆಯನ್ನೇ ನೆರೆಯಿಸುತ್ತಿದ್ದಿತು. ಈ ಬಗೆಯ ಯುದ್ಧದ ಸಿದ್ಧತೆಗೆ ಬೇಕಾಗುವ ಸಾಧನ-ಸಾಮುಗ್ರಿಗಳನ್ನೆಲ್ಲ ಒದಗಿಸಲು ದಿಲ್ಲಿಯ ಅರಮನೆ, ಬ್ರಹ್ಮಾವರ್ತದ ಅರಮನೆ, ಲಖನೌದ ಸಾಹುಕಾರರು, ಸಿದ್ಧರಾಗಿದ್ದರು. ಹಳ್ಳಿಯ ಶಾನುಭೋಗ, ಗೌಡರಿಂದ ಮೊದಲುಗೊಂಡು ದೇಶದಲ್ಲಿಯ ಎಲ್ಲಮಟ್ಟದ ಅಧಿಕಾರಿಗಳು, ಕಾರಕೂನರು, ವಕೀಲರು, ನ್ಯಾಯಾಧೀಶರು ಒಮ್ಮತರಾಗಿದ್ದರು.

## ನಾನಾಸಾಹೇಬನ ಸಂಚಾರ.

ದಂಗೆಯ ವಿಷಯಕವಾದ ಅಲ್ಲಲ್ಲಿಯ ಕಾರ್ಯಕ್ರಮ ಮತ್ತು ಮುನ್ನಡೆಯ ಸಂಗತಿಗಳು ನಾನಾಸಾಹೇಬನಿಗೆ ದಿನದಿನಕ್ಕೆ ತಿಳಿಯುತ್ತಿದ್ದರೂ, ಎಲ್ಲೆಲ್ಲಿ ಏನೇನು ನಡೆದಿರುವದೆಂಬುದರ ಪ್ರತ್ಯಕ್ಷ ಜ್ಞಾನ ಮಾಡಿಕೊಳ್ಳಲು ನಾನಾಸಾಹೇಬನು ೧೮೫೭ ನೆಯ ಮಾರ್ಚ ತಿಂಗಳಲ್ಲಿ ತನ್ನೊಬ್ಬ ತಮ್ಮ, ಮಂತ್ರಿ ಅಜೀಮುಲ್ಲಾಖಾನ ಅವರನ್ನೊಡಗೊಂಡು ಯಾತ್ರೆಯ ನೆವಮಾಡಿ ಪ್ರವಾಸಕ್ಕೆ ಹೊರಟನು. ಎಲ್ಲಕ್ಕೂ ಮೊದಲು ಅವನು ದಿಲ್ಲಿಯನ್ನು ಸಂದರ್ಶಿಸಿದನು. ಅಲ್ಲಿಂದ, ಅಂಬಾಲಾ, ಲಖನೌಗಳಿಗೆ ನಡೆದನು. ಲಖನೌವಿಗೆ ಹೋದ ದಿನವೇ ಅಲ್ಲಿಯ ಜನರು ಅಲ್ಲಿಯ ಚೀಫಕಮಿಶನರನು ಕುಳಿತಿರುವ ಕುದುರೆಯ ಬಂಡಿಯಮೇಲೆ ಕಲ್ಲು-ಮಣ್ಣನ್ನೆರಚಿದ್ದರು! ಅದರಿಂದ ಊರೊಳಗೆ ಸ್ವಲ್ಪ ಗಲಾಟೆ ಇತ್ತು. ನಾನಾಸಾಹೇಬನು ಲಖನೌವಿಗೆ ಬಂದಿರುವ ಸುದ್ದಿಕೇಳಿ, ಜನರೆಲ್ಲರೂ ಸಂತೋಷ ಮತ್ತು ಆವೇಶದಿಂದ ಹುರಿಗೊಂಡರು. ಅವನನ್ನು ರಥದಲ್ಲಿ ಕುಳ್ಳಿರಿಸಿ, ಲಖನೌ ಬೀದಿಗಳಲ್ಲೆಲ್ಲ ತಮ್ಮ ಭಾವೀನಾಯಕನೆಂದು ಮೆರವಣಿಗೆ ಹೊರಡಿಸಿದರು. ನಾನಾಸಾಹೇಬನು ಕಮೀಶನರನನ್ನು ಕಂಡು ಮಾತಾಡಿದನು; ಅವನ ಸರಳತೆಯನ್ನು ಕಂಡು, ನಾನಾಸಾಹೇಬನಿಗೆ ಯೋಗ್ಯ ಮರ್ಯಾದೆ ಮಾಡಬೇಕೆಂದು ಕಮಿಶನರನು ಆಜ್ಞೆಮಾಡಿದನು. ಅಲ್ಲಿಯ ಮರ್ಯಾದೆಯನ್ನು ಸ್ವೀಕರಿಸಿ, ಸೈನಿಕರ ಚಟುವಟಿಕೆಗಳನ್ನು ನಿರೀಕ್ಷಿಸಿ ನಾನಾಸಾಹೇಬನು ಕಾಲ್ಪಿಗೆ ನಡೆದನು.

ಮುಂದೆ ಸಿಮುಲಾದಲ್ಲಿಯ ಗುರ್ಖಾಸೈನ್ಯವನ್ನು ತನ್ನ ಕಾರ್ಯಕ್ಕೆ ತಿರುಗಿಸಿಕೊಳ್ಳಬೇಕೆಂದು ಅವನು ಸಂಕಲ್ಪಮಾಡಿದನು; ಆದರೆ ಹೋಗಲಿಲ್ಲ. ಬ್ರಹ್ಮಾವರ್ತಕ್ಕೆ ತೆರಳಿದನು. ದಂಗೆ ಏಳಲು ೩೧ ನೇ ದಿನಾಂಕವನ್ನು ಗೊತ್ತು ಮಾಡಲು ನಾನಾಸಾಹೇಬನು ಈ ಯಾತ್ರೆಗೆ ಹೊರಟಿದ್ದನಷ್ಟೇ? ಅದರ ಶುಭಸೂಚನೆಯೆಂದು ಎಲ್ಲೆಡೆಯಲ್ಲಿ ಹರಡಲು "ಚಪಾತಿಗಳನ್ನು ಹಂಚುವ ಹಂಚಿಕೆಯನ್ನು ಮಾಡಿದನು. ಈ ಚಪಾತಿಗಳನ್ನು ಎಲ್ಲ ಬಂಡುಗಾರರು "ಪ್ರಸಾದ"ವೆಂದು ಸ್ವೀಕರಿಸಿ, ಅಲ್ಲಲ್ಲಿಯ ಜನರಿಗೆ ಹಂಚುತ್ತಿದ್ದರು. ಮತ್ತು ಅದರ ಮೂಲಕ ರಣದೇವತೆಗೆ ಪ್ರಸನ್ನವಾಗಲು ಬೇಡಿಕೊಳ್ಳುತ್ತಿದ್ದರು.

## ಮಂಗಲ ಪಾಂಡೇನ ಸಾಹಸ.

ಮೇ ತಿಂಗಳ ಒಂದನೇ ದಿನಾಂಕಕ್ಕೆ ದೇಶದಾದ್ಯಂತ ಸ್ವಾತಂತ್ರ್ಯದ ಹೋರಾಟ ನಡೆಯಬೇಕೆಂದು ಗೊತ್ತಾಗಿದ್ದರೂ, ಆ ಕಾಲ ಒದಗಿಬರಲಿಕ್ಕೆ ಇನ್ನೂ ಅವಕಾಶವಿತ್ತು. ಆದಾಗ ಕಂಪನಿ ಸರಕಾರದವರು ಬಂಗಾಲದಲ್ಲಿಯ ಸೀಪಾಯಿಗಳಿಗೆ ನೆಣ ಹಚ್ಚಿದ ತುಬಾಕಿಗಳನ್ನು ಉಪಯೋಗಿಸಲಿಕ್ಕೇ ಬೇಕೆಂದು ಒತ್ತಾಯಪಡಿಸಹತ್ತಿದರು. ಬಂಗಾಲದಲ್ಲಿರುವ ಸೀಪಾಯರಲ್ಲೆಲ್ಲ ೩೪ ನೆಯ ಸೈನ್ಯ ಗುಂಪಿನವರು ದಂಗೆಏಳಲು ಬಲು ಆತುರರಿದ್ದರು. ಈ ಗುಂಪು ಕಲಕತ್ತೆಯ ಹತ್ತಿರ ಬರಾಕಪುರದಲ್ಲಿತ್ತು. ಕಲಕತ್ತೆಯ ಬಳಿ ಇರುವ ಬಂಡುಗಾರ ವಜೀರ ಅಲ್ಲೀ ನಬೀಖಾನನು ಈ ಸೈನಿಕ ಗುಂಪಿನವರಿಂದ ದಂಗೆ ಏಳಲು ಪ್ರತಿಜ್ಞೆ ಮಾಡಿಸಿಕೊಂಡಿದ್ದನು. ಈ ಗುಂಪಿನೊಳಗಿನ ಕೆಲವರನ್ನು ೧೯ ನೇ ಗುಂಪಿಗೆ ಅವನೇ ಕಳಿಸಿದ್ದನು ಇವರ ಮೇಲೆಯೇ ಹೊಸ ತುಬಾಕಿಗಳನ್ನು ಮೊದಲಿಗೆ ಪ್ರಯೋಗ ಮಾಡಿ ನೋಡುವ ಸಮಯ ಒದಗಿತ್ತು; ಆದರೆ, ಅವರೆಲ್ಲರೂ ಒಗ್ಗಟ್ಟಾಗಿ ಸೇನಾನಾಯಕನ ಮಾತನ್ನು ಅಲ್ಲಗಳೆದರು, ಮತ್ತು ಹೊತ್ತು ಬಂದರೆ, ದಂಗೆ ಎಬ್ಬಿಸಲು ನಿಶ್ಚಯಿಸಿದರು. ಇದನ್ನು ತಿಳಿದು, ಸೈನ್ಯದಲ್ಲಿಯ ಸೀಪಾಯರನ್ನು ದಂಡನೆಗೆ ಗುರಿ ಮಾಡಿದರು. ಆಗ ದಂಡಿನವರು ಚೆನ್ನಾಗಿಯೇ ಬುದ್ಧಿ ಕಲಿಸಿದರು. ಮುಂದೆ ಬರಾಕಪುರದ ದಂಡಿನಲ್ಲಿಯ ಸೀಪಾಯರ ಮೇಲೆ ಬಲುಮೆ ನಡಿಸಿದರು.

ಆಗ ಮಂಗಲ ಪಾಂಡೆ ಕೂಡ ಆ ಸೈನಿಕರ ಗುಂಪಿನಲ್ಲಿಯ ಸೈನಿಕ. ಅವನೊಬ್ಬ ಬ್ರಾಹ್ಮಣ. ದಂಡಿನಲ್ಲಿ ಸೇರಿದ್ದರೂ, ಅವನಿಗೆ ತನ್ನ ಧರ್ಮವೆಂಬುದು ಪ್ರಾಣಕ್ಕಿಂತಲೂ ಪ್ರಿಯವಾಗಿತ್ತು. ಅವನದು ಅತ್ಯಂತ ಶುದ್ಧ ಮತ್ತು ಸಾತ್ವಿಕ ಜೀವನ. ತನ್ನ ದೇಶ ಬಾಂಧವರು ಪರರ ಅಡಿಯಾಳಾಗಿ ಜೀವಿಸುತ್ತಿರುವದು, ತನ್ನ ದೇಶಕ್ಕೆ ಸ್ವಾತಂತ್ರ್ಯ ತಪ್ಪಿಹೋಗಿರುವದು ಇವೆರಡೂ ಜೀವಾಳದ ಮಾತುಗಳು ಅವನ ಎದೆಯನ್ನು ಸುಡುತ್ತಿದ್ದವು ನೆಣ ಹಚ್ಚಿದ ಬಂದೂಕುಗಳನ್ನು ಉಪಯೋಗಿಸಲು ಕಂಪನಿ ಸರಕಾರದವರು ತನ್ನ ಹಾಗೂ ತನ್ನವರ ಮೇಲೆ ಬಲುಮೆ ನಡಿಸಿರುವ ನೋಟವು ಅವನ ವೈಯಕ್ತಿಯ ರಕ್ತವನ್ನು ಉಚ್ಚಳಿಸಿತು ಆದುದರಿಂದ ಇಂಥ ಪ್ರಸಂಗದಲ್ಲಿ ತಾವು ಸುಮ್ಮನಿರದೆ. ದಂಗೆಯನ್ನೆಬ್ಬಿಸಲೇಬೇಕೆಂದು ಒತ್ತಿ ಹೇಳಿದನು. ಆದರೆ, ಅವನ ಮಾತನ್ನಾರೂ ಲಕ್ಷಿಸಲಿಲ್ಲ. ಆಗ ತನ್ನದೊಂದು ಬಂದೂಕನ್ನು ಮದ್ದಿನಿಂದ ತುಂಬಿಕೊಂಡು 'ಏಳಿರಿ, ಇದೀಗ ಧರ್ಮ ಮತ್ತು ದೇಶಕ್ಕಾಗಿ ಸಾಯುವ ಹೊತ್ತು. ಬನ್ನಿರಿ ಶತ್ರುಗಳನ್ನು ಕೊಂದು ದೇಶವನ್ನುಳಿಸೋಣ' ಎಂದು ಕೂಗುತ್ತ ಎಲ್ಲರನ್ನು ಹುರಿದುಂಬಿಸುತ್ತಿರುವಾಗ, ಒಬ್ಬ ಇಂಗ್ಲೀಷ ದಳವಾಯಿಯು ಅದನ್ನು ಕಂಡು, ಅವನನ್ನು ಸೆರೆ ಹಿಡಿಯಲು ಹೇಳಿದನು. ಅವನ ಮಾತಿಗೆ ಯಾವ ಸೀಪಾಯಿಗಳು ಮುಂಬರದೆ, ಸ್ವಸ್ಥವಾಗಿದ್ದರು. ಆ ಹೊತ್ತಿಗೆ ಮಂಗಲನು ತನ್ನ ಕೈಯಲ್ಲಿಯೇ ಇರುವ ಬಂದೂಕಿನಿಂದ ಆ ಸಾಹೇಬನನ್ನು ನೆಲಕ್ಕುರುಳಿಸಿದನು. ಅಷ್ಟರಲ್ಲಿ ಮತ್ತೊಬ್ಬ ಇಂಗ್ಲೀಷ ಅಧಿಕಾರಿಯು ಓಡಿಬಂದು ಪಿಸ್ತೂಲಿನಿಂದ ಪಾಂಡೆನನ್ನು ಕೊಲ್ಲಲೆತ್ನಿಸಿದನು. ಅದು ತಪ್ಪಿತು. ಹೀಗೆ ಒಬ್ಬೊಬ್ಬ ಅಧಿಕಾರಿಗಳು ಬಂದು, ಪಾಂಡೇನ ಮೇಲೆ ಏರಿಹೋಗುತ್ತಿರುವಾಗ "ಮಂಗಲನ ಮೈಗೆ ಕೈ ಹಚ್ಚಬೇಡಿ" ಎಂದು ಸೀಪಾಯರು ಕೂಗಿದರು. ಅಷ್ಟರಲ್ಲಿ ಮತ್ತೊಬ್ಬ ಸಾಹೇಬನು ಇಂಗ್ಲೀಷ ಸೀಪಾಯರೊಡನೆ ಕುದುರೆಯನ್ನೇರಿ ಧಾವಿಸುತ್ತ ಬಂದನು. ಇನ್ನು ತನ್ನ ಆಟ ನಡೆಯದು ಎಂದು ಮನಗಂಡು ತನ್ನ ಕೈಯ್ಯಲ್ಲಿರುವ ಮದ್ದಿನಿಂದ ತುಂಬಿರುವ ತುಬಾಕಿಯನ್ನೇ ತನ್ನ ಎದೆಗೆ ಗುರಿಯಿಟ್ಟು ಹಾರಿಸಿಕೊಂಡನು. ಆದರಿಂದ ಅವನಿಗೆ ಸ್ವಲ್ಪ ಗಾಯವಾಯಿತು. ಅವನನ್ನು ಕೂಡಲೇ ಆಸ್ಪತ್ರೆಗೆ ಒಯ್ದು, ಮುಂದೆ ವಿಚಾರಣೆ ನಡೆಸಿದರು. ದಂಗೆಗಾರರ ಹೆಸರು

ಹೇಳಲು ಅವನನ್ನು ಹಿಂಸೆಪಡಿಸಿದರು; ಆದರೆ 'ತಾನು ದೇಶದ ಧರ್ಮದ ಸ್ವಾತಂತ್ರ್ಯಕ್ಕಾಗಿಯೇ' ದೇಹದ ಹಂಗು ತೊರೆದಿರುವ ಸಂಗತಿಯನ್ನು ತಿಳಿಸಿ, ಫಿರಂಗಿಯರಮೇಲೆ ತನಗಾವ ಬಗೆಯ ದ್ವೇಷವಿಲ್ಲೆಂದೂ, ತನ್ನ ಬಂಧುಗಳಿಗೆ ತನ್ನ ದೇಶದಲ್ಲಿಯೇ ಆಗುತ್ತಿರುವ ಅವಮಾನವನ್ನು ತಾಳಿ ಕೊಳ್ಳುವದು ಸಾಧ್ಯವಿಲ್ಲವೆಂದು ಸಾರಿದನು. ಮುಂದೆ, ಎಪ್ರಿಲ ೮ ನೇ ದಿನಾಂಕ ದಲ್ಲಿ ಅವನನ್ನು ಗಲ್ಲಿಗೇರಿಸಲಾಯಿತು.

## ಮಿರತದ ದಂಗೆ.

ಮಂಗಲ ಪಾಂಡೆನನ್ನು ಗಲ್ಲಿಗೇರಿಸಿದ ಸಿಡಿಲಿನಂಥ ಸುದ್ದಿ ಎಲ್ಲೆಡೆ ಯಲ್ಲಿ ಹರಡಿತು. ಮಿರತದಲ್ಲಿರುವ ೧೯ ಮತ್ತು ೩೦ ನೆಯ ದಂಡಿನ ಗುಂಪಿನ ಸುಭೇದಾರನು ರಾತ್ರಿ ಎಲ್ಲ ಸೀಪಾಯರ ಸಭೆಕೂಡಿಸಿ ಗುಪ್ತ ಆಲೋಚನೆ ನಡೆಸಿದ ಆರೋಪಣೆಯಿಂದ ಅವನ ತಲೆ ಹೊಯ್ಸಲಾಯಿತು. ಮತ್ತು ೩೪ ನೆಯ ಗುಂಪಿನವರು ದಂಗೆ ಎಬ್ಬಿಸಲು ನಿಶ್ಚಯಿಸಿದರೆಂದು ಅವರಿಂದ ಶಸ್ತ್ರಾಸ್ತ್ರಗಳನ್ನು ಕಸಿದುಕೊಂಡು, ಅತ್ತಿತ್ತ ಕಳಿಸಿದರು. ಇದೊಂದು ಅನುಕೂಲವೇ ಆಯಿತೆಂದು ಸೀಪಾಯರು ಸಂತೋಷಪಟ್ಟರು. ಯುರೋಪಿಯನ್ ಗುಂಡಿನವರನ್ನು ಸಜ್ಜುಮಾಡಿಟ್ಟರು ಆ ಸಮಯದಲ್ಲಿ ಸಾವಿರಾರು ಜನ ಸೀಪಾಯರು ಶಸ್ತ್ರಗಳನ್ನು ಬೀಸಾಡಿ, ತಮ್ಮ ಮೈಮೇಲಿರುವ ದಂಡಿನ ಉಡುಪು, ಟೊಪ್ಪಿಗೆ, ಬೂಟು ಮುಂತಾದವುಗಳನ್ನು ಯುರೋಪಿಯನ್‌ರ ಕಣ್ಮುಂದೆ ಹರಿದು ತುಳಿದುಹಾಕಿದರು. ಅಂಬಾಲಾದಲ್ಲಾಗ ದಂಡಿನ ಮುಖ್ಯ ಠಾಣ್ಯವಿತ್ತು. ಅಲ್ಲಿ ಈ ಸುದ್ದಿ ತಲ್ಪಿನೊಡನೆ, ಅವರೂ ತಮ್ಮಲ್ಲಿಯ ದಂಡಿನ ಅಧಿಕಾರಿಗಳ ಮನೆಗಳನ್ನೆಲ್ಲ ಸುಟ್ಟುಹಾಕುವ ಯೋಜನೆ ಮಾಡಿ ದರು. ನಾನಾಸಾಹೇಬನು ಬಂದು ಹೋದಂದಿನಿಂದ ಲಖನೌ ಪಟ್ಟಣದ ಸ್ಥಿತಿ ಬಹು ವಿಲಕ್ಷಣವಾಗಿತ್ತು. ಅಲ್ಲಿಯೂ ಫಿರಂಗಿಯರ ಮನೆಗಳಿಗೆ ಬೆಂಕಿ ಹಚ್ಚುವ ಗದ್ದಲ ನಡೆಯಿತು. ೩೧ ನೇ ದಿನಾಂಕವು ಸಾರ್ವತ್ರಿಕ ಬಂಡಾಯ ಎಬ್ಬಿಸುವ ದಿನವೆಂದು ನಿಶ್ಚಿತವಾಗಿದ್ದರೂ, ಲಖನೌದಲ್ಲಿಯ ಸೀಪಾಯರು ದಂಗೆಗೆ ಆತುರರಾಗಿ ಕುಳಿತಿದ್ದರು. ಇಷ್ಟರಲ್ಲಿ, ಮಿರತದಲ್ಲಿಯ ದಂಡಿನ

ಇಂಗ್ಲೀಷ ಅಧಿಕಾರಿಗಳು ಸೀಪಾಯರ ಮನಸ್ಸು ಪರೀಕ್ಷಿಸಬೇಕೆಂದು ಬಂದೂಕುಗಳನ್ನು ಕೊಟ್ಟರು. ಆಗ ಅವರು ಅವುಗಳನ್ನಲ್ಲಿಯೇ ಬೀಸಾಡಿ ತಮ್ಮ ತಮ್ಮ ಠಾಣ್ಯಕ್ಕೆ ನಡೆದರು. ಸೇನಾಪತಿಯು ಅವರನ್ನೆಲ್ಲ ಕರೆತರಿಸಿ, ಅವರಿಗೆ ೮-೧೦ ವರ್ಷಗಳ ಕಠಿಣ ಶಿಕ್ಷೆಯನ್ನು ವಿಧಿಸಿದನು. ಎಲ್ಲ ಸೀಪಾಯಿಗಳ ಮುಂದೆಯೇ, ಅವರ ಮೈಮೇಲಿರುವ ಬಟ್ಟೆಗಳನ್ನು ತೆಗೆಯಿಸಿ, ಹರಿದುಹಾಕಿ ಅವರ ಕೈಯಲ್ಲಿರುವ ಶಸ್ತ್ರಗಳನ್ನು ಕಸಿದು, ಅವರ ಕೈಗೆ ಸಂಕೋಲೆಗಳನ್ನು ಬಿಗಿಸಿದನು. ಇದರಿಂದ ಸೀಪಾಯರ ಎದೆಗಿಚ್ಚಿಗೆ ಗಾಳಿ ಹಾಕಿದಂತಾಗಿ ಅವರ ತಾಳ್ಮೆ ತಪ್ಪಿಹೋಯಿತು. ನಮ್ಮ ಬಂಧುಗಳನ್ನು ಸೆರೆಮನೆಗೆ ಅಟ್ಟಿ, ನಾವು ಸುಖದಿಂದ ಮನೆಯಲ್ಲಿ ಸತ್ತಂತೆ ಬದುಕಿರುವದು ಸಾಧ್ಯವಿಲ್ಲವೆಂದು ಅಲ್ಲಲ್ಲಿಯ ಸೀಪಾಯರು ಗುಪ್ತಸಭೆಗಳನ್ನು ನೆರೆಯಿಸಿದರು. "೩೧ ನೇ ತಾರೀಖು ಇನ್ನೂ ದೂರಿದೆ. ಅಲ್ಲಿಯ ತನಕ ಸುಮ್ಮನಿರಲಾರೆವು. ನಾಳೆ ಬೆಳಗಾದರೆ ಭಾನುವಾರ. ಸಾಯಂಕಾಲದೊಳಗಾಗಿ ನಮ್ಮ ಬಂಧುಗಳ ಕೈಗೆ ಬಿಗಿದ ಬೇಡಿಗಳನ್ನು ಕಡಿದು ಕತ್ತರಿಸಿ, ಅವರನ್ನೆಲ್ಲ ಮನೆಗೆ ತರಡೆ ಗತ್ಯಂತರವಿಲ್ಲ" ಎಂದು ದೃಢಸಂಕಲ್ಪಗೈದರು. ಮರುದಿನ ಊರಲ್ಲಿಯ ದಂಡಿನ ಅಧಿಕಾರಿಗಳು, ಸರಕಾರಿ ಅಧಿಕಾರಿಗಳ, ಮನೆ-ಮಾರು ಸುಟ್ಟರು. ಅನೇಕರನ್ನು ಕೊಂದರು ಇಷ್ಟೆಲ್ಲ ಹಾವಳಿ ನಡಿಸಿ, ಬಂಡುಗಾರರು ದಿಲ್ಲಿಗೆ ನಡೆದರು. ಅಲ್ಲಿ ರಾವಬಹದ್ದೂರಶಹನ ಅರಮನೆಗೆ ಹೋಗಿ, ಅವರಿಗೆ ತಮ್ಮ ಮುಂದಾಳಾಗಿ ನಿಲ್ಲಲು ಬೇಡಿಕೊಂಡರು. ಆಗ ಅವನಿಗೂ ಕ್ಷಣ ಹೊತ್ತು ಸ್ಫೂರ್ತಿ ಬಂದು, ದೇಶ – ಧರ್ಮಗಳ ಉದ್ಧಾರಕ್ಕಾಗಿ ಸಾಯುವದೇ ಲೇಸು. ಈ ಬಗೆಯ ಸತ್ತ-ಬಾಳಿನಿಂದೇನು ? ಎಂಬ ವಿಚಾರ ಮಿಂಚಿತು. ನಾನು ಮುಂದಾಳಾಗಿ ಪ್ರಯೋಜನವೇನು? ನನ್ನಲ್ಲಿ ಹಣವಿಲ್ಲ. 'ನಿಮಗೆ ನನ್ನಿಂದ ಒಂದು ಕಾಸು ಕೂಡಾ ಸಂಬಳ ದೊರೆಯುವದಿಲ್ಲ. ನನ್ನ ಬೊಕ್ಕಸವೆಲ್ಲ ಬರಿದಾಗಿದೆ.' ಎಂದು ನಿರಾಸೆಗೊಂಡು ನುಡಿದನು ಆದಕ್ಕೆ "ನಾವು ಇಂಗ್ಲೀಷರ ಬೊಕ್ಕಸವನ್ನು ಸುಲಿದು, ಹಣ ತಂದು, ನಿಮ್ಮ ಪಾದಕ್ಕೆ ಅರ್ಪಿಸುವೆವು" ಎಂದು ನೂರಾರು ಜನರು ಒಂದೇ ಕಾಲಕ್ಕೆ ಗುಡುಗಿದರು. ತರುವಾಯ ದಿಲ್ಲಿಯಲ್ಲಿ ಕೊಲೆ, ಸುಲಿಗೆ, ಆರಂಭವಾಯಿತು. ಇಂಗ್ಲೀಷರು

ಹೌಹಾರಿದರು, ಕೆಲವರು ವೇಷಾಂತರದಿಂದ ಓಡಿದರು, ಕೆಲವರು ಅಡಗಿ ಕೊಂಡರು, ಕೆಲವರು ಕೈಕಾಲು ಬಿದ್ದು ಬೇಡಿಕೊಂಡು ಪಾರಾದರು. ಇನ್ನು ಕೆಲವರು ನೆರೆಯಲ್ಲಿಯೇ ಅಡವಿ ಸೇರಿದರು, ಹಲವರು ಕೊಲ್ಲಲ್ಪಟ್ಟರು. ಇಷ್ಟೆಲ್ಲ ರಕ್ತಪಾತ ಕ್ರೂರತನ ನಡೆದರೂ, ಬಂಡುಗಾರರು ಒಬ್ಬ ಇಂಗ್ಲೀಷ ಹೆಂಗಸಿನ ಮೈಗೆ ಕೈ ಹಚ್ಚಲಿಲ್ಲ. ಅವರ ಅವಮಾನ ಮಾಡಲಿಲ್ಲ. ಮುಂದೆ ಹಲವು ದಿನಗಳವರೆಗೆ ದಿಲ್ಲಿಯಲ್ಲಿ ಒಬ್ಬ ಇಂಗ್ಲೀಷ ಗೃಹಸ್ಥನೂ ಇರಲಿಲ್ಲ. ಇಂಗ್ಲೀಷ ಮಾತಾಡುವವರನ್ನೆಲ್ಲ ಬಂಡುಗಾರರು ಚನ್ನಾಗಿ ಥಳಿಸಿದರು. ಇಲ್ಲಿಯವರೆಗೆ ದಂಗೆಯ ಸ್ವಲ್ಪಮಟ್ಟಿಗೆ ಚಿತ್ರವನ್ನು ತೋರಿಸಿದಂತಾಯಿತು. ಇನ್ನು ನಾನಾಸಾಹೇಬನ ಸಮಾಚಾರವೇನೆಂಬುದನ್ನಷ್ಟು ನೋಡೋಣ.

## ಬಂಡುಗಾರರ ಕೇಂದ್ರ ಬ್ರಮ್ಹಾವರ್ತ

ಮಿರತ, ಲಖನೌ, ದಿಲ್ಲಿ, ಮುಂತಾದಕಡೆ ಬಂಡಾಯದ ಬಿರುಗಾಳಿಬಿಟ್ಟು ಧಾಳಾಧೂಳಿ ನಡೆದಿರುವ ಕಾಲಕ್ಕೆ ಬ್ರಮ್ಹಾವರ್ತದ ಅರಮನೆಯಲ್ಲಿ ಮುಂದಾ ಗುವ ಬಂಡಾಯದ ಬಹದ್ದೂರರೆಲ್ಲರೂ ಸೇರಿದ್ದರು. ಅಜೀಮುಲ್ಲಾಖಾನ ನಂತೂ ನಾನಾಸಾಹೇಬನಿಗೆ ಮೈನೆರಳಿನಂತಿದ್ದ ತಾತ್ಯಾಟೋಪಿಯು ಅಲ್ಲಿಯೇ ಬೆಳೆದು ದೊಡ್ಡವನಾದವನು. ಚಿಕ್ಕಂದಿನಲ್ಲಿ ತಾತ್ಯಾಟೋಪಿ, ಝಾಂಸಿಯ ರಾಣಿ, ನಾನಾಸಾಹೇಬ ಇವರೆಲ್ಲರೂ ಕೂಡಿ ಆಡಿದವರಿದ್ದರು. ತಾತ್ಯಾನ ತಂದೆಯು ಬಾಜೀರಾಯನಲ್ಲಿಯೇ ಕೆಲಸಕ್ಕೆ ಇದ್ದುದರಿಂದ ನಾನಾಸಾಹೇ ಬನ ಒಡನಾಟದಲ್ಲಿ ತಾತ್ಯಾ ಹಲವು ಯುದ್ಧ ವಿದ್ಯೆಗಳಲ್ಲಿ ಬಲ್ಲಿದನಾಗಿದ್ದನು. ಮೇಲಾಗಿ ಪೂರ್ವದ ಮರಾಠ ವೀರರ ಕಾರ್ಯಗಳು ಅವನ ಎದೆಯಲ್ಲಿ ತುಡುಕಿ ತುಳುಕುವಂತೆ ಮಾಡುತ್ತಿದ್ದವು. ಹೊತ್ತು ಬಂದರೆ, ತನ್ನ ಮೈಯ ಲ್ಲಿರುವ ಕಲಿತನವನ್ನು ತೋರ್ಪಡಿಸಲು ಅವನು ತನ್ನ ಕತ್ತಿಯನ್ನು ಮಸೆ ಯುತ್ತಿದ್ದನು. ಮಿರತ ಮುಂತಾದ ಕಡೆಯಲ್ಲಿದ್ದ ಬಂಡಾಯದ ಕೊಲೆಯ ಸುದ್ದಿಗಳನ್ನು ಕೇಳಿಯೂ ಕೇಳದವರಂತೆ ನಾನಾಸಾಹೇಬನು ತನ್ನ ಗುಪ್ತ ಸಿದ್ಧತೆಯಲ್ಲಿಯೇ ಇದ್ದನು.

## ಕಾನಪುರದಲ್ಲಿಯ ಪರಿಸ್ಥಿತಿ.

ಮಿರತ ದಿಲ್ಲಿ ಲಖನೌಗಳಿಗೂ ಕಾನಪುರಕ್ಕೂ ಸಂಬಂಧವಿರುವ ತಂತಿ ಮುಂತಾದವುಗಳನ್ನು ಬಂಡುಗಾರರು ಹರಿದು ಹಾಕಿದ್ದರಿಂದ ಯಾವ ಸುದ್ದಿ ಯನ್ನೂ ತಿಳಿಯಲಿಕ್ಕೆ ದಾರಿ ಇರಲಿಲ್ಲ. ಕಾನಪುರದಲ್ಲಿಯ ದಂಡಿನ ಅಧಿ ಕಾರಿಗಳಿಗೆ ತಡವಾಗಿ ಸುದ್ದಿ ತಿಳಿದರೂ, ಕಾನಪುರದಲ್ಲಿಯ ದೇಶೀಯ ಸೀಪಾಯರಿಗೆ ಈ ಸುದ್ದಿ ಗೊತ್ತಿತ್ತು. ಕಾನಪುರ ದಂಡಿನ ಮುಖ್ಯಸ್ಥನು ವ್ಹೀಲರ ಎಂಬವನಿದ್ದನು. ಮೀರತ ಮುಂತಾದ ಕಡೆ ಎದ್ದ ಬಂಡಾಯುಗಳು ಬೇಗ ಶಾಂತವಾಗುವವೆಂದು ಅವನು ತಿಳಿದಿದ್ದನು; ಆದರೆ, ಕಾನಪುರ ದಂಡಿನಲ್ಲಿಯ ದೇಶೀ ಸೀಪಾಯಿಗಳು ಮತ್ತು ಊರವರು 'ಇಂಗ್ಲೀಷರ ಆಳಿಕೆಯ ಕಾಲ ಸಮೀಪಿಸಿತು' ಎಂದು ಭಾವಿಸಿ ಎಲ್ಲರೂ ತಮ್ಮ ತಮ್ಮೊ ಳಗೆ ಮಾತಾಡಿಕೊಳ್ಳುತ್ತಿದ್ದರು. ಇಂಗ್ಲೀಷ ಹೆಂಗಸರು-ಗಂಡಸರು ಪೇಟೆ ಯಲ್ಲಿ ಏನಾದರೂ ಸಾಮಾನು-ಸಟ್ಟು ಕೊಳ್ಳಲಿಕ್ಕೆ ಬಂದಾಗ, ಒಳ್ಳೇ ಬಿಂಕ ದಿಂದ 'ಸಾಕಿನ್ನು, ನಿಮ್ಮ ಸೊಕ್ಕು-ಸೆಡವು! ಇಲ್ಲಿಂದ ಕಾಲ್ತೆಗೆಯುವ ಕಾಲವು ಇನ್ನಿಷ್ಟರಲ್ಲಿಯೇ ನಿಮಗಾಗಿ ಕಾದು ಕೊಂಡಿದೆ!' ಎಂದು ಹಂಗಿ ಸುತ್ತಿದ್ದರು. ಇಂಥ ಮಾತುಗಳು ವ್ಹೀಲರನ ಕಿವಿಯವರಿಗೆ ಹೋದುದರಿಂದ ಅವನು ಮುಂದಾಗೆಯೇ ಎಚ್ಚತ್ತು, ಗಂಡಾಂತರ ಒದಗಿದರೆ, ತನ್ನವರ ರಕ್ಷಣೆಗಾಗಿ ಸಾಕಷ್ಟು ಸಿದ್ಧತೆ ನಡಿಸಿದನು.

## ಕಂಪನಿಯವರ ಹುಚ್ಚುತನ.

ಕಾನಪುರದಲ್ಲಿ ಇಷ್ಟು ಗದ್ದಲ-ಗಲಾಟೆಗಳು ನಡೆದಿದ್ದರೂ, ಬ್ರಹ್ಮಾ ವರ್ತದಲ್ಲಿ ಅದರ ಸುಳಿವು ಇರಲಿಲ್ಲ ಎಲ್ಲವೂ ನಿಃಶಬ್ದ, ನೀರವ, ನಾನಾ ಸಾಹೇಬನು ಹಲವು ಜನ ಸಂಸ್ಥಾನಿಕರಂತೆಯೇ ಮದಡ ಇರುವನೆಂದು ವ್ಹೀಲರನು ತಿಳಿದು, ಅವನ ಸಹಾಯವನ್ನು ಕೋರಿದನು. ತೋಳಗಳಿಗೆ ಕುರಿಗಳ ಮಂದೆಯನ್ನು ಕಾಯುವದಕ್ಕೆ ಔತಣ ಕೊಟ್ಟಂತಾಯಿತು. ತತ್ ಕ್ಷಣವೇ ನಾನಾಸಾಹೇಬನು ತನ್ನಲಿದ್ದುಬಿದ್ದ ಎರಡು ತೋಫು, ಮುನ್ನೂರು

ಜನ ಸೀಪಾಯಿಗಳು, ಕುದುರೆ ಸವಾರ, ಮತ್ತು ಕಾಲುದಳ ಮುಂತಾದ್ದನ್ನು ಕಟ್ಟಿಕೊಂಡು, ಕಾನಪುರಕ್ಕೆ ಹೊರಟನು, ಕಾನಪುರದಲ್ಲಿ ಕಂಪನಿಯವರು ತಮ್ಮ ದಂಡಿನ ವ್ಯವಸ್ಥೆಯನ್ನು ಮಾಡಿಕೊಂಡಿದ್ದರು, ನಾನಾಸಾಹೇಬನು ಇಂಗ್ಲೀಷರ ಠಾಣ್ಯದ ನಡುವೆ ತನ್ನ ಬಿಡಾರವನ್ನು ಹೊಡೆದನು, ಕಾನಪುರದ ಕಲೆಕ್ಟರನು ಹಿಲರ್ಸಡೆನ್ನ ನಾನಾಸಾಹೇಬನು ಹೊತ್ತಿಗೆ ಬಂದು ತಮ್ಮನ್ನು ಕೂಡಿಕೊಂಡದ್ದಕ್ಕಾಗಿ ಬಲು ಸಂತೋಷಪಟ್ಟನು. ಒಂದು ವೇಳೆ ಸೀಪಾಯರು ಬಂಡಾಯ ಎಬ್ಬಿಸಿದರೆ, ನಾನಾಸಾಹೇಬನಿಗೆ ಜಿಲ್ಹೆಯ ಬೊಕ್ಕಸವನ್ನು ಕಾಯಲಿಕ್ಕೆ ಇಟ್ಟು, ಇಂಗ್ಲೀಷರ ಹೆಂಗಸರು ಮಕ್ಕಳನ್ನು ಬ್ರಹ್ಮಾವರ್ತಕ್ಕೆ ಕಳಿಸುವ ಯೋಚನೆಯೂ ಇದ್ದಿತು; ಮತ್ತು ಎಲ್ಲ ಬಗೆಯ ವ್ಯವಸ್ಥೆಯನ್ನು ನೋಡಿಕೊಳ್ಳಲಿಕ್ಕೆ ಒಂದು ಲಕ್ಷ ರೂಪಾಯಿಗಳನ್ನು ಅವನ ಕೈಯಲ್ಲಿ ಕೊಡುವ ವಿಚಾರವೂ ಇದ್ದಿತು. ಇದರಮೇಲಿಂದ ಇಂಗ್ಲೀಷರು ನಾನಾಸಾಹೇಬನ ವಿಷಯದಲ್ಲಿ ಎಷ್ಟೊಂದು ಮಬ್ಬುಗತ್ತಲೆಯಲ್ಲಿ ತೊಳಲುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ! ಎಂಥವರಿಗಾದರೂ ವಿನಾಶಕಾಲಕ್ಕೆ ಬುದ್ಧಿ ಮಂಕಾಗುತ್ತದೆನ್ನುವ ಮಾತು ಸುಳ್ಳಲ್ಲ.

## ಕಾನಪುರದಲ್ಲಿಯ ಗುಟ್ಟಿನ ಕಾರ್ಯಕಲಾಪಗಳು.

ನಾನಾಸಾಹೇಬನು ತನ್ನ ಸೈನ್ಯ ಸಮೇತ ಕಾನಪುರಕ್ಕೆ ಬಂದಿದ್ದರೂ, ಯಾವಾಗಲೋ ಸಂಧಿ ಸಾಧಿಸಿ, ತನ್ನ ಗುಟ್ಟಿನ ಮಾತುಕತೆಗಳನ್ನು ನಡಿಸಲಿಕ್ಕೆ ಕಾನಪುರಕ್ಕೆ ಹೋಗುತ್ತಿದ್ದನು. ಕಾನಪುರದ ಸುಭೇದಾರ ಟಿಕ್ಕಾಸಿಂಗನ ಮನೆಯಲ್ಲಿ ಈ ಗುಟ್ಟಿನ ಮಾತುಗಳು ನಡೆಯುತ್ತಿದ್ದವು. ಅಲ್ಲಿ ಬ್ರಿಟೀಷರ ಮೇಲೆ ಕೆಂಡಕಾರುವ ಜ್ವಾಲಾಪ್ರಸಾದ, ಮಹಮ್ಮದಲೀ ಮುಂತಾದವರು ಬರುತ್ತಿದ್ದರು ಕಾನಪುರದ ಸೈನಿಕ–ಸೀಪಾಯರೆಲ್ಲರೂ ಸುಭೇದಾರ ಟಿಕ್ಕಾಸಿಂಗನ ಮಾತಿನಲ್ಲಿದ್ದರು. ಇವರೆಲ್ಲರು ಕೂಡಿ, ಬಂಡಾಯದ ಕಾರ್ಯಕ್ರಮಗಳನ್ನು ನಿಶ್ಚಯಗೊಳಿಸುತ್ತಿದ್ದರು. ಮಿರಠದ ಸೀಪಾಯರು ಭಾವನಾವಶರಾಗಿ ಒಮ್ಮಿಂದೊಮ್ಮೆ ದುಡುಕಿ ದಂಗೆ ಎಬ್ಬಿಸಿದ್ದರಿಂದ ಹಿಂದೊಮ್ಮೆ ಎಲ್ಲ ಕೆಲಸ ಕೆಟ್ಟುಹೋಗಿದ್ದಿತು. ಇನ್ನು ಮುಂದಿನ ಯಾವ ಕಾರ್ಯಗಳು

ಹಾಗೆ ಅವ್ಯವಸ್ಥಿತವಾಗಿ ನಡೆಯದಂತೆ ನೋಡಿಕೊಳ್ಳಲು ಮಾತಾಡಿಕೊಂಡರು. ಜೂನ ೧ ನೇ ದಿನ ನಾನಾಸಾಹೇಬನು ತನ್ನ ತಮ್ಮ ಬಾಳಾಸಾಹೇಬ ಮತ್ತು ಅಜೀಮುಲ್ಲಾ ಇವರೊಂದಿಗೆ ಗಂಗೆಯ ದಂಡೆಗೆ ಬಂದನು. ಅಲ್ಲಿ ಟಿಕ್ಕಾಸಿಂಗ ಹಾಗೂ ಬೇರೆ ಮುಂದಾಳುಗಳು ಇದ್ದರು. ಅವರೆಲ್ಲರೂ ಕೂಡಿ, ಒಂದು ದೋಣಿಯಲ್ಲಿ ಕುಳಿತು, ಗಂಗೆಯಲ್ಲಿ ಕುಳಿತು ಕೈಯಲ್ಲಿ ಗಂಗೆಯ ಉದಕವನ್ನು ಹಿಡಿದು, "ದೇಶ ಮತ್ತು ಧರ್ಮದ ಸ್ವಾತಂತ್ರ್ಯಕ್ಕಾಗಿ ನಾನು ಸ್ವಾತಂತ್ರಸಂಗರದೊಳಗೆ ಧುಮುಕುವೆ" ಎಂದು ಎಲ್ಲರೂ ಪ್ರತಿಜ್ಞೆಮಾಡಿದರು.

## ಕಾನಪುರದಲ್ಲಿಯ ಗಡಿಬಿಡಿ.

ಆ ಪ್ರಸಂಗದಲ್ಲಿ ಕಾನಪುರದಲ್ಲಿಯೇ ಎಲ್ಲ ಮುಂದಾಳುಗಳಿದ್ದರು. ಇಡಿಯ ಕಾನಪುರದ ನಾಗರಿಕರು, ಅಲ್ಲಿರುವ ಮೂರು ಸಾವಿರ ಸೀಪಾಯರು ದಂಗೆ ಏಳುವದರಲ್ಲಿದ್ದರೂ, ಇದರ ಸುಳಿವು ಸಹ ಕಂಪನಿಯವರಿಗಿರಲಿಲ್ಲ. ಜೂನ ೪ ನೆಯ ದಿನಾಂಕದಲ್ಲಿ ಮೊದಲೇ ಗೊತ್ತಾಗಿರುವಂತೆ, ಮೂರು ಸಾವಿರ ಸೀಪಾಯರೆಲ್ಲರು ರಣಗೀತದ ತಾಳದೊಡನೆ ಒಳ್ಳೇ ಸಡಗರದಿಂದ ನಾನಾಸಾಹೇಬನಿರುವ ನವಾಬಗಂಜ ಠಾಣ್ಯಕ್ಕೆ ನಡೆದರು. ಈ ಸಪ್ಪಳ ಕೇಳಿ ವ್ಹೀಲರನ ಎದೆಗುಂಡಿಯು ಏನಾಗಿರುವದೋ ಎಂದು ಧಡ-ಧಡ ಹಾರ ಹತ್ತಿತು ಆದರೂ ಆ ದಿನ ಯಾವ ಬಗೆಯ ದಂಗೆ ನಡೆಯಲಿಲ್ಲ. ಸೀಪಾಯರು ದಂಗೆಎಬ್ಬಿಸಲು ಸಿದ್ಧರಿದ್ದರೂ, ಸುಭೇದಾರ ಟಿಕ್ಕಾಸಿಂಗನು ಅವರಿಗೆ ನಿಜ ಸ್ಥಿತಿಯನ್ನು ತಿಳಿಸಿ, ತಡೆಯಲು ಹೇಳಿದನು. ತರುವಾಯ ಸೀಪಾಯರೆಲ್ಲರೂ ಸೇರಿ, ನಾನಾಸಾಹೇಬನನ್ನು ನೋಡವ ಹಂಬಲವನ್ನು ವ್ಯಕ್ತಪಡಿಸಿದರು ಆಗ ನಾನಾಸಾಹೇಬನು ಎಲ್ಲರಿಗೂ ದರ್ಶನಕೊಟ್ಟು, ಅವರಿಂದ 'ಸಲಾಮಿ' ಸ್ವೀಕರಿಸಿದನಂತರ, ಎಲ್ಲರೂ ನಾನಾಸಾಹೇಬನೇ ತಮ್ಮ ಅರಸು ಎಂದು ಒಪ್ಪಿಕೊಂಡು, ಸುಭೇದಾರ ಟಿಕ್ಕಾಸಿಂಗನಿಗೆ ಸೇನಾಪತಿಯನ್ನಾಗಿ ಆರಿಸಿದರು. ಅಂದು ಆನೆಯ ಅಂಬಾರಿಯಮೇಲೆ ಸ್ವಾತಂತ್ರ್ಯ ನಿಶಾನಿಯ ಮೆರವಣಿಗೆ ನಡೆದು, 'ಇಂದಿನಿಂದ ನಾನಾಸಾಹೇಬರೇ ನಮ್ಮ

ಅರಸು, ಅವರೇ ನಮ್ಮನ್ನಾಳುವವರು' ಎಂದು ಡಂಗುರ ಹೊಯ್ಸಿದರು. ದೇಶಿಯ ಸೀಪಾಯಿಗಳು ಮೊದಲಾದ ದಂಡಿನವರು ಕಾನಪುರ ಕೋಟೆಯಲ್ಲಿ ಬೀಡು ಬಿಟ್ಟರು. ನಾನಾಸಾಹೇಬನು ಕಾನಪುರ ಇಂಗ್ಲೀಷ ದಂಡಿನ ನಾಯಕ ನಾದ ವ್ಹೀಲರನಿಗೆ 'ನಾವಿನ್ನು ನಿಮ್ಮ ಮೇಲೆ ಹಲ್ಲೆ ನಡಿಸುವೆವು, ಎಚ್ಚರಿಕೆ' ಎಂದು ಚೀಟಿ ಬರೆದು ಕಳಿಸಿ, ತಾನು ಮುಂದಿನ ಕೆಲಸಕ್ಕೆ ಅಣಿಯಾದನು.

## ಕಾನಪುರದಲ್ಲಿ ಕೊಲೆ-ಸುಲಿಗೆ

ಟಿಕ್ಕಾಸಿಂಗನು ಮದ್ದು–ಗುಂಡು, ಶಸ್ತ್ರಾಸ್ತ್ರಗಳನ್ನು ಕೂಡು ಹಾಕಿ, ಅವುಗಳನ್ನೆಲ್ಲ ಎಲ್ಲೆಲ್ಲಿ ಇಡಬೇಕೋ ಅಲ್ಲಲ್ಲಿ ಇಡಿಸಿದನು. ಇಂಗ್ಲೀಷ ದಂಡಿ ನವರು ಇರುವ ಕಡೆಗೆ ಮುಖಮಾಡಿ ತೋಫುಗಳನ್ನು ಸರಿಯಾಗಿ ನಿಲ್ಲಿಸಿದರು. ಮಧ್ಯಾಹ್ನಕ್ಕೆ ಇತ್ತ ಊರೊಳಗಿನ ಜನರು, ಮುಸಲ್ಮಾನರು, ಕಮ್ಮಾರರು, ನೂಲುವವರು, ವರ್ತಕರು, ನಾಗರಿಕರು, ತಮ್ಮತಮ್ಮ ಕೈಯಲ್ಲಿ ಸಿಕ್ಕಿದುದನ್ನು ತೆಗೆದುಕೊಂಡು, ಇಂಗ್ಲೀಷರ ಮೇಲೆ ಹಲ್ಲೆ ನಡೆಸಲು ಸಜ್ಜಾಗಿ ನಿಂತರು. ಊರೊಳಗಿನ ಕಚೇರಿಕಟ್ಟೆ, ಕಾಗದಪತ್ರ ಮುಂತಾದ್ದನ್ನು ಸುಟ್ಟರು. ಹಲವು ಇಂಗ್ಲೀಷರನ್ನು ಕೊಂದರು ಅತ್ತ ಕೋಟೆಯಲ್ಲಿ ನಾನಾಸಾಹೇಬನು ತೋಫು ಗಳನ್ನು ಹಾರಿಸಹತ್ತಿದೊಡನೆ ಇಂಗ್ಲೀಷರು ಹೆಂಗಸರು, ಮಕ್ಕಳು–ಮರಿ ಗಳು ಹೌಹಾರಿ ಪ್ರಾಣರಕ್ಷಣೆಗಾಗಿ ಅತ್ತಿತ್ತ ಓಡಹತ್ತಿದರು. ಸೂರ್ಯನು ಕೂಡ ಇಂಗ್ಲೀಷರ ಮೇಲೆ ಸೇಡು ತೀರಿಸಿಕೊಳ್ಳಬೇಕಂತಲೋ ಏನೋ ತನ್ನ ಬಿಸಡುವ ಕಿರಣಗಳಿಂದ ಕೆಂಡವನ್ನೇ ಕಾರುವಂತಿತ್ತು. ಹಕ್ಕಿಪಕ್ಕಿಗಳು ಕೂಡ ತಮ್ಮ ಗೂಡುಗಳಿಂದ ಮುಗಿಲಿಗೆ ಹಾರಿದವು. ಇಂಗ್ಲೀಷರ ಹುಡುಗರು ಹೆಂಗಸರು ಮೊದಲಾದವರನ್ನು ಕಾಪಾಡಿ ಬದುಕಿಸುವದರಲ್ಲಿ ಸಾಕು ಸಾಕಾ ಯಿತು. ಬಂಡುಗಾರರಲ್ಲಿ ಯಾರಾದರೂ ಫಿತೂರಿಯಾಗಿ ತಮಗೆ ಎಲ್ಲ ಸಂಗತಿ ತಿಳಿಸುವರೇನೋ ಎಂದು ಯತ್ನಿಸಿದರು. ಅವರಿಗೆ ಲಕ್ಷಗಟ್ಟಲೆ ರೂಪಾಯಿ ಕೊಡುವ ಆಸೆ ತೋರಿಸಿದರು; ಆದರೆ ಅದೆಲ್ಲ ವ್ಯರ್ಥವಾಯಿತು. ಇಂಗ್ಲೀ ಷರ ಠಾಣ್ಯಗಳು ತೋಫಿನ ಗುಂಡಿನ ಸುರಿಮಳಿಗೆ ಸುಟ್ಟು ಬೂದಿಯಾದವು. ಅವರ ಶಸ್ತ್ರಗಳೆಲ್ಲ ಬಂಡುಗಾರರ ಕೈ ಸೇರಿದವು. ವ್ಹೀಲರನು ಮುಂದು

ಗಾಣದೆ, ಬದುಕಿರುವ ಇಂಗ್ಲೀಷರ ಹೆಂಗಸರು ಹುಡುಗರನ್ನೆಲ್ಲ ಒಂದೆಡೆ ಯಲ್ಲಿ ಕೂಡುಹಾಕಿ, ತಾನು ಅಲ್ಲಿಂದಲೇ ೧೬-೧೭ ದಿವಸಗಳ ವರೆಗೆ ಒಂಟಿ ಯಾಗಿ ಬಂಡುಗಾರರೊಡನೆ ಕಾದುತ್ತ ಅವರನ್ನೆಲ್ಲ ರಕ್ಷಿಸಿದನು.

## ನಾಗರಿಕರ ಬಗ್ಗೆ ನಾನಾಸಾಹೇಬನ ಕಳವಳ.

ಕೋಟೆಯಲ್ಲಿ ಇನ್ನೂ ಗೊಂದಲ ನಡೆಯುತ್ತಿರುವಾಗಲೇ ನಾನಾ ಸಾಹೇಬನು ಕಾನಪುರದ ನಾಗರೀಕರ ಸುಖ-ಜೀವನಕ್ಕೆ ಶಕ್ಯವಿದ್ದಷ್ಟು ಅನುಕೂಲ ಮಾಡಿಕೊಡಬೇಕೆಂದು, ಊರೊಳಗಿನ ಪ್ರಮುಖರನ್ನು ಕರೆಯಿಸಿ, ಅವರಿಗೆ ಆಹಾರ ಸಾಮುಗ್ರಿ ಮುಂತಾದ್ದು ಸಿಗುವ ವ್ಯವಸ್ಥೆ ಮಾಡಿದನು. ನ್ಯಾಯವಿಚಾರಣೆಗಾಗಿ ತನ್ನದೇ ಒಂದು ಕೋರ್ಟನ್ನು ಸ್ಥಾಪಿಸಿ, ಜ್ವಾಲಾ ಪ್ರಸಾದ, ಅಜೀಮುಲ್ಲಾ ಮೊದಲಾದವರನ್ನು ನ್ಯಾಯಾಧೀಶರ ಕೆಲಸಕ್ಕೆ ನಿಯಮಿಸಿ, ತನ್ನ ತಮ್ಮ ಬಾಬಾಸಾಹೇಬನನ್ನು ಅಧ್ಯಕ್ಷನನ್ನಾಗಿ ಮಾಡಿದನು. ಹೀಗೆ ಒಳಗಿಂದ-ಹೊರಗಿಂದ ಕೂಡಿಯೇ ತಮಗೆ ಸ್ಥಳ ಸಿಕ್ಕದಂತೆ ನಾನಾ ಸಾಹೇಬನು ಮಾಡಿದ್ದರಿಂದ ಇಂಗ್ಲೀಷರು ಪೂರ್ಣ ನಿರಾಸೆಗೊಂಡರು. ಇನ್ನು ನಾನಾಸಾಹೇಬನ ಎದುರು ನಿಂತು ಕಾದುವದು ಶಕ್ಯವಿಲ್ಲವೆಂದು ಮನಗಂಡರು. ಆಗ ಒಪ್ಪಂದ ಸೂಚಕ ನಿಶಾನಿಯನ್ನು ಏರಿಸಿದರು. ಆದಾಗ ನಾನಾಸಾಹೇಬನು ಕಾದುವದನ್ನು ನಿಲ್ಲಿಸಿ, ತನಗೆ ಸೆರೆಸಿಕ್ಕಿರುವ ಒಬ್ಬ ಇಂಗ್ಲೀಷ ಹೆಂಗಸಿನ ಕೈಯಲ್ಲಿ ಒಂದು ಚೀಟಿಯನ್ನು ಕೊಟ್ಟು ವ್ಹೀಲರನಿಗೆ ಕಳಿಸಿದನು. ಅದರಲ್ಲಿ 'ಶರಣಾಗತರಾದವರನ್ನು ಸುರಕ್ಷಿತವಾಗಿ ಅಲ್ಲಾಬಾದಕ್ಕೆ ತಲ್ಪಿಸಲಾಗುವದು' ಎಂದು ಬರೆದಿದ್ದನು. ಅದರಂತೆ ಮಾತುಕತೆ ನಡೆದು, 'ಇಂಗ್ಲೀಷರು ತಮ್ಮಲ್ಲಿರುವ ಮದ್ದು-ಗುಂಡು, ಶಸ್ತ್ರ-ಅಸ್ತ್ರ ಮತ್ತು ಬೊಕ್ಕಸ ವನ್ನು ನಾನಾಸಾಹೇಬನಿಗೆ ಒಪ್ಪಿಸಬೇಕು. ನಾನಾಸಾಹೇಬನು ಇಂಗ್ಲೀಷ ರನ್ನೆಲ್ಲ ಯೋಗ್ಯರೀತಿಯಿಂದ ಅಲ್ಲಾಬಾದಕ್ಕೆ ಮುಟ್ಟಿಸಬೇಕು' ಎಂದು ನಿರ್ಣಯ ವಾಯಿತು. ಇಂಗ್ಲೀಷರು ಕಾನಪುರ ಬಿಟ್ಟು ಹೋಗುವರು, ನಾನಾಸಾಹೇ ಬನು ಕಾನಪುರದಲ್ಲಿ ಸ್ವಾತಂತ್ರ್ಯ ಧ್ವಜ ಏರಿಸಿದರು ಎಂಬೀ ಸುದ್ದಿಯು ಮಿಂಚಿನಂತೆ ಎಲ್ಲೆಡೆಯಲ್ಲಿ ಹರಡಿದ ಕೂಡಲೇ ದಿಕ್ಕು ದಿಕ್ಕುಗಳಿಂದ ಜನರು

ಕಾನಪುರಕ್ಕೆ ಬಂದು, ತುಂಬಲಾರಂಭಿಸಿದರು. ಇವರೆಲ್ಲರಲ್ಲಿ ಇಂಗ್ಲೀಷರ ಮೇಲೆ ಸೇಡು ತೀರಿಸಿಕೊಳ್ಳುವ ಹುಮ್ಮಸ್ಸು ಕುದಿಯುತ್ತಿತ್ತು. ಆದರೆ ನಾನಾ ಸಾಹೇಬನು ಎಲ್ಲ ಇಂಗ್ಲೀಷರನ್ನು ಅಲ್ಹಾಬಾದಕ್ಕೆ ಸುರಕ್ಷಿತವಾಗಿ ತಲ್ಪಿಸುವ ವಚನ ಕೊಟ್ಟಿದ್ದಕ್ಕಾಗಿ ಮರುಗಿದರು.

## ಇಂಗ್ಲೀಷರ ಪ್ರಯಾಣ ಮತ್ತು ಕೊಲೆ

ಅಲ್ಹಾಬಾದಕ್ಕೆ ಇಂಗ್ಲೀಷರನ್ನೆಲ್ಲ ಕಳಿಸಲು ನಾಲ್ವತ್ತು ಡೋಣಿಗಳನ್ನು ಸಜ್ಜುಗೊಳಿಸಿದ್ದರು. ಜೂನ ೨೭ ನೇ ದಿನಾಂಕ ಇಂಗ್ಲೀಷರು ಹೊರಡು ವದು ಗೊತ್ತಾದಂತೆ ಎಲ್ಲ ಸಿದ್ಧತೆ ನಡೆಯಿತು. ಅಂದು ಸತಿಚೌರಾಘಾಟ ದಲ್ಲಿ ತುಂಬ ಜನರ ಸಂದಣಿ. ಅಜೀಮುಲ್ಲಾಖಾನ, ಬಾಳಾಸಾಹೇಬ, ತಾತ್ಯಾಟೋಪಿ ಮೊದಲಾದವರು ಘಾಟದಮೇಲಿರುವ ದೇವಾಲಯದ ಮೆಟ್ಟಿ ಲುಮೇಲೆ ನಿಂತಿದ್ದರು. ಎಲ್ಲ ಇಂಗ್ಲೀಷರು ಗಂಗೆಯ ದಂಡೆಯವರೆಗೆ ಹೋಗಲು ನಾನಾಸಾಹೇಬನು ಪಲ್ಲಕ್ಕಿಗಳ ಅನುಕೂಲತೆ ಮಾಡಿಕೊಟ್ಟಿದ್ದನು. ವ್ಹೀಲರನನ್ನು ಆನೆಯ ಅಂಬಾರಿಯಲ್ಲಿ ಕುಳ್ಳಿರಿಸಿ ಒಯ್ಯುವ ಯೋಜನೆ ಮಾಡಿದ್ದರೂ ಅದಕ್ಕವನು ನಾಚಿಕೊಂಡನು, ತಾನು ಪಲ್ಲಕ್ಕಿಯಲ್ಲಿ ಕುಳಿತು ತನ್ನ ಮನೆಯವರನ್ನು ಆನೆಯಮೇಲೆ ಕಳಿಸಿದನು. ಈ ಸಂಗತಿಯಿಂದ ಇಂಗ್ಲೀಷರಿಗೆ ಹೊಟ್ಟೆ ಉರಿಯಾಗುವದು ಉಳಿದು, ಪ್ರಾಣ ಉಳಿಯಿತು ಎಂದು ಆನಂದವಾಯಿತು. ಎಲ್ಲರೂ ಗೆದ್ದೆವೆಂದು ಹುರುಪಿನಿಂದ ಹೊರಟರು. ಎಲ್ಲ ಗಂಡಸರು ಹೆಂಗಸರು ದೋಣಿಗಳಲ್ಲಿ ಕುಳಿತರು. ನಾವಿಕರು ದೋಣಿ ಗಳ ಹುಟ್ಟು ಕಡಿಯ ಹತ್ತಿದರು. ಅಷ್ಟರಲ್ಲಿ ಒಂದು ಮೂಲೆಯಿಂದ ಯಾವನೊ ಒಬ್ಬ ಸಿಳ್ಳುಹಾಕಿದನು. ಕೂಡಲೇ ಧಡಲ್ ಧಡಲ್ಲೆಂದು ಬಂದೂಕುಗಳ ಸಪ್ಪಳ ಕೇಳಿಸಿತು. ಆಗಲೇ ಡೋಣಿಯವರು ದೋಣಿಯಿಂದ ಹಾರಿಕೊಂಡರು. "ಫಿರಂಗಿಯವರನ್ನು ಹೊಡೆಯಿರಿ" ಎಂಬ ಒಂದೇ ಒಂದು ಕೂಗಾಟ ನಡೆಯಿತು. ಸೀಪಾಯರು ಹೊಳೆಯಲ್ಲಿ ಹಾರಿಕೊಂಡರು. ಡೋಣಿ ಗಳೆಲ್ಲ ಬೆಂಕಿಹತ್ತಿ ಉರಿಯಹತ್ತಿದವು. ಕೆಲವರು ಗಂಗೆಯಲ್ಲಿ ಹಾರಿಕೊಂ ಡರು; ಹಲವರು ಮುಳುಗಿ ಸತ್ತರು. ಸ್ವಲ್ಪ ಜನರು ಮಾತ್ರ ಈಸಿ ಪಾರಾ

ದರು. ಬಂದೂಕಿನ ಹೊಡೆತಕ್ಕೆ ನೂರಾರು ಜನರು ಬಲಿಯಾದರು. ಅವರ ನೆತ್ತರದಿಂದ ಗಂಗೆಯ ನೀರೆಲ್ಲ ಕೆಂಪಗಾಯಿತು. ಎಲ್ಲಿ ನೋಡಿದರೂ ಹೊಳೆಯಲ್ಲೆಲ್ಲ ಇಂಗ್ಲೀಷರ ದೇಹ-ರುಂಡಗಳು ತೇಲಹತ್ತಿದವು. ಇಂಗ್ಲೀಷರ ಗೋಳಾಟಕ್ಕೆ ಅಂತವಾರವಿರಲಿಲ್ಲ.

## ನಾನಾಸಾಹೇಬನ ಕಳವಳ

ಈ ಸಮಯಕ್ಕೆ ನಾನಾಸಾಹೇಬನು ಬ್ರಹ್ಮಾವರ್ತದಲ್ಲಿದ್ದನು. ಅವನಿಗಿದರ ಸುದ್ದಿಯೇ ಗೊತ್ತಿರಲಿಲ್ಲ. ಪ್ಲಾಸಿಯ ಕಾಳಗವಾಗಿ, ಅಂದಿಗೆ ನೂರು ವರ್ಷಗಳು ತುಂಬಿದ್ದವು. ಇಂಗ್ಲೀಷರು ತಮ್ಮನ್ನು ಅತ್ಯಂತ ಕೀಳಾಗಿ ನೋಡಿ, ಹೀನೈಸುತ್ತಿರುವ ಬಗ್ಗೆ ಬಂಡುಗಾರರಾದ ಸೀಪಾಯರಿಗೆ ತುಂಬ ರೊಚ್ಚು ಇತ್ತು. ಅದರ ಸೇಡು ತೀರಿಸಿಕೊಳ್ಳಲು ಅವರು ಯಾವಾಗಲೂ ಆತುರರಾಗಿರುವದರಿಂದ ತಮ್ಮ ಮುಂದಾಳುಗಳ ಮಾತನ್ನು ಅಷ್ಟೊಂದು ಕಟ್ಟು ನಿಟ್ಟಿನಿಂದ ಪಾಲಿಸುತ್ತಿರಲಿಲ್ಲ. ಹಿಂದು ಮುಂದಿನ ಪರಿಣಾಮಗಳನ್ನು ಲಕ್ಷಕ್ಕೆ ತಾರದೆ ಒಮ್ಮೆಲೆ ತಮ್ಮ ಮನಸ್ಸಿನಲ್ಲಿಯ ಕುದಿಯನ್ನು ಇಳಿಸಲು ಮನಬಂದಂತೆ ನಡೆಯುತ್ತಿದ್ದರು. ಅದರೊಳಗಿನದೇ ಇದೊಂದು ಪ್ರಸಂಗ. ಇರಲಿ, ಆ ಸುದ್ದಿಯನ್ನು ನಾನಾಸಾಹೇಬನಿಗೆ ತಿಳಸಲಿಕ್ಕೆಂದು ಒಬ್ಬ ಶೂರನು, ಒಳ್ಳೆ ಭರದಿಂದ ಬ್ರಹ್ಮಾವರ್ತಕ್ಕೆ ಧಾವಿಸಿ ಹೋದನು. ಆ ಕಾಲಕ್ಕೆ ತನ್ನ ಅರಮನೆಯಲ್ಲಿ ನಾನಾಸಾಹೇಬನು ಮುಂದಿನ ಆಲೋಚನೆ ಮಾಡುತ್ತ ಮೆಲ್ಲನೆ ಪಡಸಾಲೆಯಲ್ಲಿ ಹೆಜ್ಜೆ ಇಕ್ಕುತ್ತಿದ್ದನು. ಸೀಪಾಯರ ದಂಗೆಯ ಕೊಲೆಯ ಸಂಗತಿಯನ್ನು ಸವಾರನು ಹೇಳಿದ ಕೂಡಲೇ "ಇಷ್ಟೆಲ್ಲ ಕೊಲೆ ನಡಿಸಲಿಕ್ಕೇನೂ ಕಾರಣವಿರಲಿಲ್ಲ. ಆಗಲಿ, ನಿಮಗೆ ಅಷ್ಟು ರೊಚ್ಚು ಇದ್ದರೆ ಇಂಗ್ಲೀಷರ ಗಂಡಸರನ್ನು ಕೊಲ್ಲಿರಿ, ಹೆಂಗಸರು, ಮಕ್ಕಳಿಗೆ ಮಾತ್ರ ಕೈಹಚ್ಚಬೇಡಿರಿ." ಎಂದು ಸವಾರನಿಂದ ಹೇಳಿಕಳಿಸಿದನು. ಅಷ್ಟಕ್ಕೆ ಕೊಲೆ-ಸುಲಿಗೆ ನಿಂತಿತು. ಕಾನಪುರದಲ್ಲಿದ್ದ ಒಂದು ಸಾವಿರ ಇಂಗ್ಲೀಷರಲ್ಲಿ ೪ ಮಂದಿ ಗಂಡಸರು, ಹೆಂಗಸರು, ಹುಡುಗರು ಕೂಡಿ ೧೨೫ ಜನರೇ ಬದುಕಿದ್ದರು. ನಾನಾಸಾಹೇಬರು ಅವರನ್ನೆಲ್ಲ ಬ್ರಹ್ಮಾವರ್ತದಲ್ಲಿಯೆ ಸೆರೆಯಲ್ಲಿಟ್ಟು, ಅವರಿಗೆ

ಉಣ್ಣಲಿಕ್ಕೆ ಚಪಾತಿ ಮತ್ತು ಮಾಂಸ ಕೊಡುತ್ತಿದ್ದರು. ಅವರಿಗೆ ಹೆಚ್ಚು ಕಷ್ಟದ ಕೆಲಸ ಹಚ್ಚದೆ, ಬೀಸಲಿಕ್ಕೆ ಹಚ್ಚುತ್ತಿದ್ದರು. ಮಕ್ಕಳಿಗೆ ಕುಡಿಯಲು ಹಾಲು ಪೂರೈಸುತ್ತಿದ್ದರು. ಕೆಲವು ಬಂಡುಗಾರರು ಇಂಗ್ಲೀಷರ ಹೆಂಗಸರನ್ನು ಓಡಿಸಿಕೊಂಡು ಹೋಗಲೆತ್ನಿಸಿದಾಗ ಅವರನ್ನು ಬಿಡಿಸಿ, ಅಪರಾಧಿಗಳಿಗೆ ದಂಡನೆ ಮಾಡಲಾಯಿತು ಇಲ್ಲಿಗೆ ಕಾನಪುರದಲ್ಲಿಯ ಇಂಗ್ಲೀಷರ ಸುಳುವು ಸದ್ದು ಅಡಗಿ ಅವರು ಇದ್ದರೋ ಇಲ್ಲವೋ ಎಂಬ ಮಟ್ಟಿಗೆ ಸ್ಥಿತಿ ಆಯಿತು.

## ಕಾನಪುರದಲ್ಲಿ ದರ್ಬಾರ.

೨೮ ನೆಯ ದಿನಾಂಕ ಕಾನಪುರದಲ್ಲಿ ದರ್ಬಾರ ನೆರೆಯಿಸುವ ಸಂಭ್ರಮದ ಉತ್ಸವ. ಅರಮನೆಯನ್ನೆಲ್ಲ ತಳಿರು ತೋರಣಗಳಿಂದಲೂ, ಬಗೆ-ಬಗೆಯ ಬಣ್ಣದ ನಿಶಾನಿಗಳಿಂದಲೂ ಅಲಂಕರಿಸಿದ್ದರು. ನೆಲಕ್ಕೆ ಬಣ್ಣದ ಜಮಖಾನೆಗಳನ್ನು ಹಾಸಿ, ತರತರದ ರೇಶ್ಮೆಯ ಪರದೆಗಳನ್ನು ಇಳಿಬಿಟ್ಟಿದ್ದರು ಸಾವಿರಾರು ಜನರು ಹೊಸ ಬಟ್ಟೆಗಳನ್ನು ಹಾಕಿಕೊಂಡು, ನೋಡಲಿಕ್ಕೆ ಬಂದಿದ್ದರು. ಅಂದು ಬೆಳಿಗ್ಗೆ ಸೈನಿಕರೆಲ್ಲರ ಕವಾಯಿತು ನಡೆಯಿತು. ಅಲ್ಲಲ್ಲಿಯ ಕ್ರಾಂತಿಕಾರರು ಮತ್ತು ಸಾವಿರಾರು ಜನರು ಈ ಉತ್ಸವ ನೋಡಲಿಕ್ಕೆಂದು ದೂರಿಂದ ಬಂದಿದ್ದರು. ಕಾನಪುರವನ್ನು ತಮ್ಮ ದೇಹದ ಹಂಗು ತೊರೆದು, ಕಾಪಾಡಿದಂಥ ತೋಫಖಾನೆಯ ಸೀಪಾಯರಿಗೆ ವಿಶೇಷ ಮರ್ಯಾದೆ ಮಾಡಲಾಯಿತು. ಹಿಂದೂ-ಮುಸಲ್ಮಾನರು ಒಬ್ಬ ತಾಯಿಯ ಮಕ್ಕಳಂತೆ ಒಗ್ಗಟ್ಟಾಗಿ ಸೇರಿದ್ದರು. ಮೊತ್ತಮೊದಲು ದಿಲ್ಲಿಯ ಅರಸನ ಸನ್ಮಾರ್ಥವಾಗಿ ೧೦೧ ತೋಫುಗಳನ್ನು ಹಾರಿಸಿದರು, ತರುವಾಯ ನಾನಾ ಸಾಹೇಬನು ದರ್ಬಾರಕ್ಕೆ ಬಂದನು. ಜನರೆಲ್ಲರೂ ಆನಂದ ನಿರ್ಭರರಾಗಿ, ಆವನ ಹೆಸರಿನ ಜಯ-ಜಯಕಾರ ಮಾಡಿದರು. ೨೧ ತೋಫುಗಳನ್ನು ಹಾರಿಸಲಾಯಿತು. "ನಾನಾಸಾಹೇಬನು ಸೈನಿಕರಿಗೂ, ನಾಗರಿಕರಿಗೂ ಇದೆಲ್ಲ ಶ್ರೇಯ ಈ ಉತ್ಸವದೊಳಗೆ-ವೈಭವದೊಳಗೆ ಎಲ್ಲರೂ ಪಾಲುಗಾರರು, ಎಂದು ಎಲ್ಲರಿಗೆ ಕೃತಜ್ಞತೆಯನ್ನು ತೋರ್ಪಡಿಸಿದನು; ಮತ್ತು ಸೀಪಾಯರು ಪಟ್ಟ ಶ್ರಮಕ್ಕಾಗಿ ಒಂದು ಲಕ್ಷರೂಪಾಯಿಗಳನ್ನು ಹಂಚುವ ಏರ್ಪಾಟು ಮಾಡಿ

ದನು. ಎಲ್ಲ ಸೇನಾಪತಿಗಳಿಗೂ ಯೋಗ್ಯ ಮರ್ಯಾದೆ ಸಲ್ಲಿಸಿದ ನಂತರ ಅಂದಿನ ಉತ್ಸವ ಸಮಾರಂಭವು ಮುಗಿಯಿತು. ಮುಂದೆ ೧ ನೇ ಜುಲೈ ದಿನಾಂಕ ದಿನವೇ ಬ್ರಹ್ಮಾವರ್ತದಲ್ಲಿ ಮತ್ತೊಂದು ದೊಡ್ಡ ದರ್ಬಾರ ನಡೆಯಿತು. ಆ ದಿನ ಬ್ರಹ್ಮಾವರ್ತದ ಅರಮನೆಯಲ್ಲಿ ವಿಶೇಷ ಸಮಾರಂಭ. ಪೇಶವೆಯರ ಹಳೆಯ ಸಿಂಹಾಸನವನ್ನಂದು ದರ್ಬಾರದಲ್ಲಿಟ್ಟರು. ನಾನಾ ಸಾಹೇಬನು ಮಂಗಲ-ಸ್ನಾನ, ಪೂಜಾದಿಗಳನ್ನು ಮುಗಿಸಿ, ಹಣೆಯಲ್ಲಿ ಕುಂಕುಮ ತಿಲಕವನ್ನಿಟ್ಟುಕೊಂಡು, ಸಿಂಹಾಸನವನ್ನಲಂಕರಿಸಿದನು. ಮುತ್ತೈದೆಯರು ಆರತಿಯನ್ನೆತ್ತಿದರು. ನಗಾರಿ—ನೌಬತ್ತು, ವಾದ್ಯಗಳ ಘೋಷ, ತೋಪುಗಳ ಗರ್ಜನೆ ಆಯಿತು. ಕಾನಪುರದ ಸೆಟ್ಟರು, ಸಾವುಕಾರರು ಹಲವು ವಿಧದ ಕಾಣಿಕೆಗಳನ್ನು ನಾನಾಸಾಹೇಬನಿಗೆ ಅರ್ಪಿಸಿದರು. ಸ್ವರಾಜ್ಯ ಸ್ವಾತಂತ್ರ್ಯಗಳ ಸಂಭ್ರಮದಲ್ಲಿ ಎಲ್ಲರೂ ವೈಮರೆತರು.

## ಗಂಡಾಂತರ.

ನಾನಾಸಾಹೇಬನ ಪಟ್ಟಾಭಿಷೇಕದ ಸಮಾರಂಭದಲ್ಲಿಯೇ ಮುಂಬರುವ ಗಂಡಾಂತರವು ಕಾದುಕೊಂಡು ಕುಳಿತಂತಿತ್ತು. ಆ ಸಮಾರಂಭವೆಂದರೆ, ಆರುವ ದೀಪವು ಒಮ್ಮೆಲೆ ದೊಡ್ಡದಾಗುವ ತೆರನಾಗಿತ್ತು. ಆದರೆ ಈ ಮುಂದಿನ ಗಂಡಾಂತರದ ಎಚ್ಚರಿಕೆಯು ಯಾರಿಗೂ ಬರಲಿಲ್ಲವೆಂಬುದೊಂದು ವಿಷಾದದ ಸಂಗತಿಯು. ಕಾನಪುರದಲ್ಲಿ ಇಂಗ್ಲೀಷರ ಕೊಲೆ ನಡೆದು ಕೋಲಾಹಲವಾದ ಸುದ್ದಿಯು ಲಖನೌ, ಕಲಕತ್ತೆ ಮುಂತಾದ ಕಡೆಗೆ ತಲ್ಪಿತು. ಎಲ್ಲೆಡೆಯಲ್ಲಿ ಇಂಗ್ಲೀಷ ದಂಡಾಳುಗಳ ಗಡಿಬಿಡಿ, ಓಡ್ಯಾಟಕ್ಕೆ ಮೊದಲಾಯಿತು. ನಾನಾಸಾಹೇಬನು ಇದರ ಲಕ್ಷಣ ತಿಳಿದು, ಫತ್ತೇಗಡದ ಕಡೆಗೆ ತನ್ನ ಸೈನಿಕರನ್ನಟ್ಟಿದನು. ಜ್ವಾಲಾಪ್ರಸಾದ ಮತ್ತು ಟಿಕ್ಕಾಸಿಂಗರು ಆ ದಂಡಿನ ಸೇನಾಪತಿಗಳಾಗಿ ಹೋಗಿದ್ದರು. ಬ್ರಹ್ಮದೇಶ ಮತ್ತು ಚೀನದಿಂದ ಇಂಗ್ಲೀಷದಂಡಿನವರು ಒಳ್ಳೇ ಹುರುಪಿನಿಂದ ಬಂದಿದ್ದರು. ಅವರು ಫತ್ತೇಪುರವನ್ನು ಸುಟ್ಟು ಬೂದಿಮಾಡಿ, ಕಾನಪುರವನ್ನು ಹೊಕ್ಕರು. ಅವರು ಊರಲ್ಲೆಲ್ಲ ಹಾವಳಿ ನಡಿಸಿ, ಕೊಲೆ-ಸುಲಿಗೆ ಮಾಡುತ್ತಿರುವ

ವರ್ತಮಾನ ನಾನಾಸಾಹೇಬನು ಕೇಳಿ ತನ್ನ ಬಿಳಿಯ ಕುದುರೆಯನ್ನೇರಿ, ಕಾನ ಪುರವನ್ನು ಕಾಪಾಡಲಿಕ್ಕೆಂದು ಸೈನ್ಯದೊಂದಿಗೆ ಧಾವಿಸಿ ಬಂದನು. ಸೇನಾಪತಿ ಹ್ಯಾವಲಾಕ್‌ನು ತನ್ನ ಆಯುಷ್ಯವನ್ನೆಲ್ಲ ಸೈನ್ಯದಲ್ಲಿ ಮತ್ತು ಹಲವು ಯುದ್ಧ ಗಳಲ್ಲಿ ಕಳೆದವನಾದ್ದರಿಂದ, ಸೈನ್ಯ ರಚನೆಯಲ್ಲಿ ಬಲು ನಿಪುಣನೆಂದು ಹೆಸ ರಾಗಿದ್ದನು. ಬಂಡುಗಾರರಲ್ಲಿಯೂ ಯುದ್ಧ–ಕೌಶಲ್ಯವನ್ನರಿತ ಬಿಲ್ಲಾಳುಗಳು ಇರುವರೆಂಬ ಅರಿವು ಅವನಿಗಿತ್ತು; ಆದುದರಿಂದ ಅವನು ತನ್ನ ಕೈಕೆಳಗಿನ ಅಧಿಕಾರಿಗಳನ್ನೆಲ್ಲ ಕರೆದು, ಮೊದಲು ಯಾವ ನಿಟ್ಟಿನಿಂದ ದಂಡಿನ ಮೇಲೆ ಹಲ್ಲೆ ನಡಿಸಬೇಕೆಂಬುದನ್ನು, ಅವರಿಗೆ ತಿಳಿ ಹೇಳಿದನು. ಪ್ರಾರಂಭಕ್ಕೆ ಅವರು ನಾನಾಸಾಹೇಬನ ಮುಂದಾಳಾಗಿ ನಿಂತಿರುವ ದಂಡಿನ ಮೇಲೆಯೇ ಹಲ್ಲೆ ನಡೆಸಿದರು. ಈ ದಂಡಿನಲ್ಲಿಯ ಕೆಚ್ಚೆದೆಯ ದಂಡಾಳುಗಳು ಯುದ್ಧ ದಲ್ಲಿ ನುರಿತವರಾದ್ದರಿಂದ, ನಾನಾಸಾಹೇಬನ ದಂಡಿನವರ ತೋಫುಗಳಿಗೆ ಎದುರಾಗಿಯೇ ಸೈನಿಕರ ಸದೆಬಡಿಯುತ್ತ, ಒಳ್ಳೇ ಧೈರ್ಯದಿಂದ ನುಗ್ಗಿದರು ಅವರ ಮರ ಹೊಡೆತಕ್ಕೆ ನಾನಾಸಾಹೇಬನ ದಂಡಿನವರು ಕಾನಪುರದ ಕಡೆಗೆ ಕಾಲ್ತೆಗೆಯುವದರಲ್ಲಿದ್ದರು; ಅಷ್ಟರಲ್ಲಿ ನಾನಾಸಾಹೇಬನು ಅವರನ್ನು ಹುರಿದುಂಬಿಸಿ, ತೋಫಖಾನೆಯವರಿಗೆ ತೋಫುಹಾರಿಸಲು ಆಜ್ಞೆಮಾಡಿದನು ವೀರಾಳುಗಳು ತಮ್ಮ ಕತ್ತಿಗಳನ್ನು ಝಳಪಿಸುತ್ತ, ಶತ್ರುಗಳನ್ನು ತರಿಯುತ್ತ ಕಾದುತ್ತಿದ್ದರು, ಇಷ್ಟರಲ್ಲಿ ಇಂಗ್ಲೀಷ ಸೈನಿಕರು ಕೆರಳಿ, ಕಾದಾಡುವ ಆಬ್ಬ ರವು ಹೆಚ್ಚಾಯಿತು. ನಾನಾಸಾಹೇಬನು ಆ ಹೊತ್ತಿನಲ್ಲಿ ತನ್ನ ಶಕ್ತಿಮೀರಿ ಸೈನಿಕರನ್ನು ತಡೆದು ಹಿಡಿಯಲು ಹೋರಾಡಿದನು. ಪ್ರಯೋಜನವಾಗಲಿಲ್ಲ ಅವನ ಸೈನಿಕರೆಲ್ಲರೂ ಹೆದರಿ ಬ್ರಹ್ಮಾವರ್ತಕ್ಕೆ ಓಡಿದರು. ಇಂಗ್ಲೀಷ ದಂಡಿನವರು ಜಯಶಾಲಿಗಳಾಗಿ, ಆನಂದಾತಿಶಯದಿಂದ ಕೂಗುತ್ತ ಜಯ ಜಯಕಾರ ಮಾಡುತ್ತ ಕಾನಪುರವನ್ನು ಹೊಕ್ಕರು. ಅವರು ಊರ ಜನ ರನ್ನು ಪರಿ–ಪರಿಯಿಂದ ಹಿಂಸೆ ಪಡಿಸಿ, ಕೊಂದರು. ನೂರಾರು ಜನರನ್ನು ಗಲ್ಲಿಗೇರಿಸಿದರು. ಆ ಕಾಲಕ್ಕೆ ದೇಶಕಾರ್ಯಕ್ಕಾಗಿ ಅತ್ಯಂತ ಸಮಾಧಾನ ದಿಂದ ಶಿಲುಬಿಗೇರಿದ ಸಿಡಿಲಾಳುಗಳ ಶಾಂತಿ ಸಮಾಧಾನಗಳನ್ನು ಎಷ್ಟು ಬಣ್ಣಿಸಿದರೂ ಸಾಲದು! ಅವರ ಅಂದಿನ ನಡೆ–ನುಡಿಗಳು ಯೋಗಿಯು

ಸಮಾಧಿಯಲ್ಲಿ ಸೇರುವಂತೆ ಇದ್ದವೆಂದು ಒಬ್ಬ ಇಂಗ್ಲೀಷ ಇತಿಹಾಸಕಾರನು ಬರೆದಿರುವನು.

## ನಾನಾಸಾಹೇಬನು ಪಾರಾದನು.

ಇಂಗ್ಲೀಷ ಸೇನಾಪತಿ ಹ್ಯಾವಲಾಕ್‌ನು ಎಲ್ಲ ದಾರಿಗಳನ್ನು ಕಟ್ಟು ಮಾಡಿರುವಂತೆ ಬ್ರಹ್ಮಾವರ್ತ, ಕಾನಪುರಗಳ ದಾರಿಯನ್ನು ಸೈನಿಕರ ಕಾವಲಿಟ್ಟು ಮುಚ್ಚಿದ್ದನು. ಇದರಿಂದ, ನಾನಾಸಾಹೇಬನಿಗೆ ಪಾರಾಗಲಿಕ್ಕೆ ಯಾವ ದಾರಿಯೂ ಕಾಣಲಿಲ್ಲ. ಅಂಥ ಸಂಧಿಯಲ್ಲಿ ಹಂಚಿಕೆಯಿಂದ ಶತ್ರುಗಳ ಕೈಗೆ ಸಿಗದೆ ಪಾರಾಗುವದೂ ಒಂದು ದೊಡ್ಡ ಜಾಣತನದ ಕೆಲಸವೇ ಆಗಿತ್ತು. ಆದರೂ, ಒಳ್ಳೇ ಮುಂಧೋರಣೆಯಿಂದ ನಾನಾಸಾಹೇಬನು ತನ್ನ ಹೆಂಡತಿಯು ಮನೆಯು ಜನರೊಡನೆ ಯಾರ ಕೈಗೆ ಹತ್ತದಂತೆ ಪಾರಾಗಿ ಆಯೋಧ್ಯೆಯ ಬೇಗಮಳ ಆಶ್ರಯಕ್ಕೆಂದು ರೋಹಿಲಖಂಡಕ್ಕೆ ಓಡಿದನು. ಇಂಗ್ಲೀಷ ದಂಡಿನವರು ಬ್ರಹ್ಮಾವರ್ತ, ಕಾನಪುರ, ಆಯೋಧ್ಯೆಗಳಲ್ಲಿ ನುಗ್ಗಿ, ಮನ್ಸಾರೆ ಜನರ ಕೊಲೆ ನಡಿಸಿದರು. ಅವರು ನಾನಾಸಾಹೇಬನ ಅರಮನೆಯನ್ನು ಸುಟ್ಟರು. ಅಲ್ಲಿಯ ಸಾಮಾನುಗಳನ್ನೆಲ್ಲ ಸೂರೆಮಾಡಿದರು. ಹ್ಯಾವಲಾಕ್‌ನು ಸೇನಾಪತಿ ಕ್ಯಾಂಬೆಲ್ಲನನ್ನು ನಾನಾಸಾಹೇಬನ ಬೆನ್ನಟ್ಟಲು ಕಳಿಸಿದನು. ಆಗ, ಅಲ್ಲಲ್ಲಿ ನಾನಾಸಾಹೇಬನಿಗೂ ಇಂಗ್ಲೀಷ ದಂಡಿನವರಿಗೂ ಕದನಗಳು ನಡೆದವು. ನಾನಾಸಾಹೇಬನು ತನ್ನ ಜನರೊಡನೆ ನೇಪಾಳ ಗಡಿಯಲ್ಲಿರುವ ದಟ್ಟವಾದ ಅಡವಿಯನ್ನು ಆಶ್ರಯಿಸಿದನು. ಈ ಕಾದಾಟ-ಹೋರಾಟ ಒಂದು ವರ್ಷ ನಡೆದಿತ್ತು. ಶತ್ರುಗಳು ಶರಣು ಬಂದರೆ, ಅವರಿಗೆ ಕ್ಷಮೆ ತೋರಿಸುವ ಅಭಯವಚನವನ್ನು ಕಂಪನಿ ಸರಕಾರದವರು ಸಾರಿದರು. ಆ ವೇಳೆಯಲ್ಲಿ ಸುಮಾರು ೨೫ ಸಾವಿರದಷ್ಟು ಬಂಡುಗಾರರು ಕಂಪನಿಯವರಿಗೆ ತಮ್ಮಲ್ಲಿಯ ಶಸ್ತ್ರಾಸ್ತ್ರಗಳನ್ನು ಒಪ್ಪಿಸಿ ಶರಣುಹೊಕ್ಕರು.

## ನಾನಾಸಾಹೇಬನ ಕೊನೆಗಾಲ

ನಾನಾಸಾಹೇಬನು ನೇಪಾಳ ರಾಜ್ಯದಲ್ಲಿ ಸೇರಿದನು. ಇಂಗ್ಲೀಷರ ಕೈಗೆ ಸಿಗದ್ದರಿಂದ ಅವನನ್ನು ಹಿಡಿದುಕೊಟ್ಟವರಿಗೆ ಒಂದು ಲಕ್ಷ ರೂಪಾಯಿ

ಕಾಣಿಕೆ ಕೊಡಲಾಗುವದೆಂದು ಡಂಗುರ ಸಾರಿದರು. ಕೊನೆಗೂ ನಾನಾ ಸಾಹೇಬನು ಇಂಗ್ಲೀಷರ ಕೈಗೆ ಸಿಕ್ಕಲಿಲ್ಲ. ನೇಪಾಳದ ಕೆಟ್ಟಚಳಿಯು ಅರಣ್ಯದೊಳಗೆ ಅಲ್ಲಲ್ಲಿ ತಿರಗುತ್ತ ಓಡಾಡುವದರಲ್ಲಿ ನಾನಾಸಾಹೇಬನು ದಣಿದು ಹಣ್ಣಾದನು. ಸುಖದಿಂದ ಬೆಳೆದ ಅರಸು ಪಿಂಡವು ಜೀವಕ್ಕೆ ಹೊತ್ತು-ಹೊತ್ತಿಗೆ ಊಟ-ನಿದ್ದೆಗಳನ್ನು ಕಾಣುವದು ಕೂಡ ಕಷ್ಟವಾಯಿತು. ಇದರಿಂದ ದಿನದಿನಕ್ಕೆ ನಾನಾಸಾಹೇಬನು ಕ್ಷೀಣನಾದನು. ಅದರೊಳಗೆ ಜ್ವರ ಬರಹತ್ತಿದ್ದರಿಂದ ಬಲು ಕಷ್ಟಪಟ್ಟು, ಅಡವಿಯಲ್ಲಿಯೇ ಒಂದು ಹಳ್ಳದ ದಂಡೆಯಲ್ಲಿಯೇ ಪ್ರಾಣ ಬಿಟ್ಟನು. ನಾನಾಸಾಹೇಬನ ಮನೆಯವರು ಮುಂದೆ ಬಹುಕಾಲ ನೇಪಾಳ ರಾಜ್ಯದಲ್ಲಿಯೇ ಇದ್ದರು.





## ಗಾಳಿಯೋಟದ ಕಡುಗಲಿಯಾದ

# ೨. ತಾತ್ಯಾ ಟೋಪಿ

ಯಾವ ಕಾಲಕ್ಕೆ, ಯಾರಲ್ಲಿ, ಯಾವ ಬಗೆಯ ಸ್ಫೂರ್ತಿ ಮತ್ತು ಆವೇಶಗಳು ತುಂಬುತ್ತವೆಂಬುದನ್ನು ಯಾರು ಮುನ್ನುಡಿಯಲು ಶಕ್ತರು? ತಕ್ಕ ಕಾಲ ಒದಗಿದರೆ, ಪರಮಾತ್ಮನು ಹುಲ್ಲು ಕಡ್ಡಿಯಲ್ಲಿ ತನ್ನ ಶಕ್ತಿಯನ್ನು ತುಂಬಿ, ಅದರಿಂದ ಮಹಾ-ಮಹಾ ಕಾರ್ಯಗಳನ್ನು ಮಾಡಿಸುವನು. ಈ ಮಾತಿನ ಮತಿತಾರ್ಥವನ್ನು ತಾತ್ಯಾ ಟೋಪಿಯ ಜೀವನದಲ್ಲಿ ನಾವು ಸ್ಪುಟವಾಗಿ ಕಾಣಬಹುದು.

## ತಾತ್ಯಾ ಟೋಪಿಯ ಹುಟ್ಟು.

ಬ್ರಹ್ಮಾವರ್ತದಲ್ಲಿ ಬಾಜೀರಾಯನ ಆಸರಕ್ಕಿದ್ದ ಪಾಂಡುರಂಗಪಂತ ಎಂಬ ಬ್ರಾಹ್ಮಣನ ಮಗನು. ಎಲ್ಲರೂ ಅವನನ್ನು ತಾತ್ಯಾ ಎಂದು ಕರೆಯುತ್ತಿದ್ದರು. ತಾತ್ಯಾನ ನಿಜವಾದ ಹೆಸರು ರಘುನಾಥ. ಚಿಕ್ಕಂದಿನಿಂದ ಬಾಜೀರಾಯನಲ್ಲಿಯೇ ಇದ್ದುದರಿಂದ ರಘುನಾಥನು ನಾನಾಸಾಹೇಬನ ಆಟದ ಗೆಳೆಯನಾದನು. ತನ್ನ ಬುದ್ಧಿ ಚಾತುರ್ಯ, ಮಾತಿನ ಜಾಣತನ, ವ್ಯವಹಾರದ ಧೋರಣೆ ಇವುಗಳಿಂದ ತಾತ್ಯಾ ಬೇಗನೇ ಕಾರಕೂನನಾಗಿ ಕೆಲಸ ಮಾಡಲಾರಂಭಿಸಿದನು. ಅವನ ವ್ಯವಹಾರ ನೈಪುಣ್ಯ, ಎಲ್ಲರಿಗೂ ಬೆಲ್ಲದ ಹೇರಾಗಿ ನಡೆಯುವ ಅವನ ಸ್ವಭಾವ ಇವುಗಳಿಗೆ ಮೆಚ್ಚಿ, ಪೇಶವೆ ಬಾಜೀರಾಯನು ತುಂಬಿದ ಓಲಗದಲ್ಲಿ ಅವನಿಗೆ ಒಂಭತ್ತು ರತ್ನಗಳಿಂದ ಬೆಳಗುವ ಒಂದು ಟೊಪ್ಪಿಗೆಯನ್ನು ಕೊಟ್ಟು, ಗೌರವಿಸಿದಂದಿನಿಂದ 'ಟೊಪ್ಪಿಗೆಯ ತಾತ್ಯಾ' ಅಥವಾ ತಾತ್ಯಾ ಟೋಪಿ ಎಂದು ಹೆಸರಾದನು. ಗೌರವಕ್ಕೆ ತಕ್ಕಂತೆ, ತಾತ್ಯಾ ಸಾಹೇಬನ ಬುದ್ಧಿ-ಬಲಗಳು ಚಿಗುರುತ್ತ ನಡೆದು, ಯಾವುದೊಂದು ಭಾರವಣೆಯ ಕಾರ್ಯಗಳಿಗೆ ನಾನಾ ಸಾಹೇಬನು ತಾತ್ಯಾನನ್ನು ಕೇಳದೆ ಇರುತ್ತಿರಲಿಲ್ಲ.

## ಪ್ರಸಂಗದಲ್ಲಿ ಮನುಷ್ಯನ ಪರೀಕ್ಷೆ.

ಹೊತ್ತು ಬಂದಾಗಲೇ ಮನುಷ್ಯನ ಪರೀಕ್ಷೆ ಎಂಬುವ ಮಾತು ಸುಳ್ಳಲ್ಲ. ಬಂಡಾಯದ ಸಿದ್ಧತೆಯ ಆಲೋಚನೆಯಲ್ಲಿ ನಾನಾಸಾಹೇಬನು ಮುಳುಗಿರುವಾಗ, ಮನಸ್ಸಿನಲ್ಲಿ ಬಂದ ವಿಚಾರಗಳನ್ನು ಒಂದೇ ಏಟಿಗೆ ಮಾಡಿ ತೋರಿಸುವ ಯೋಗ್ಯತೆಯ ಮನುಷ್ಯನು ಯಾರು? ಎಂಬುವ ಸಮಸ್ಯೆಯು ತಲೆ ತಿನ್ನ ಹತ್ತಿತು. ಆ ಸಮಯದಲ್ಲಿ ತನ್ನ ಓಲಗದಲ್ಲಿಯೇ ಸುಳಿದಾಡುತ್ತಲಿರುವ ಒಂದು ವ್ಯಕ್ತಿಯ ಕಡೆಗೆ ನಾನಾ ಸಾಹೇಬನ ಲಕ್ಷ್ಯ ಹೋಯಿತು. ತಾತ್ಯಾ ಟೋಪಿಯು ಆ ಕಾಲಕ್ಕೆ ತನ್ನ ಮುಂದೆ ಲೆಕ್ಕದ ಹೆಬ್ಬೊತ್ತಿಗೆಗಳನ್ನು ಹರವಿಕೊಂಡು ಕೆಲಸದಲ್ಲಿ ತೊಡಗಿದ್ದನು. ನಾನಾ-

ಸಾಹೇಬನು ಆಳುಮಗನನ್ನು ಕರೆದು, ತಾತ್ಯಾನನ್ನು ಕರೆಯಹೇಳಿದನು. ಲೆಕ್ಕಣಿಕೆಯನ್ನು ಕಿವಿಯಲ್ಲಿಟ್ಟುಕೊಂಡು, ಇದ್ದಕ್ಕಿದ್ದಂತೆ ತಾತ್ಯಾ ಓಡಿಬಂದು ಕೈಮುಗಿದುಕೊಂಡು ತನ್ನ ಒಡೆಯನ ಮುಂದೆ ನಿಂತನು. ನಾನಾಸಾಹೇಬನು ಮುಂದೆ ಬಂದು, ಅವನ ಕೈಯಲ್ಲಿದ್ದ ಲೆಕ್ಕಣಿಯನ್ನು ತೆಗೆದಿಟ್ಟು, 'ತಾತ್ಯಾ ಇನ್ನು ಲೆಕ್ಕ ಮಾಡುತ್ತ ಕುಳ್ಳಿರುವ ಕೆಲಸ ಸಾಕು! ಇಗೋ ಈ ಯುದ್ಧದ ಉಡುಪು' ಎಂದು ವೀರಾಳಿನ ಉಡುಪನ್ನು ಕೊಟ್ಟು, ಸೇನಾಪತಿಯ ಮಹತ್ವದ ಕೆಲಸವನ್ನು ಒಪ್ಪಿಸಿದನು. ಅಂದಿನಿಂದ ಕಾರಕೂನನಾಗಿದ್ದ ತಾತ್ಯಾ ಸೇನಾಪತಿಯಾದನು. ಈ ಕಾರ್ಯವನ್ನು ತಾತ್ಯಾ ಎಷ್ಟು ನಿಚ್ಚಟದ ಸ್ವಾಮಿನಿಷ್ಠೆಯಿಂದ ನಡಿಸಿದರೆಂಬುದು ರೋಮಾಂಚಕಾರಿಯಾದ ಅವನ ಧೈರ್ಯ-ಸಾಹಸಗಳಿಂದ ಮುಂದೆ ಕಂಡು ಬರುವದು. ಬಂಡಾಯದಲ್ಲಿ ಸೇರಿ ಹೋರಾಡಿದ ವೀರರಲ್ಲಿ ಈ ತಾತ್ಯಾನಷ್ಟು ದಿವಸ ಅಂದರೆ ಸುಮಾರು ಎರಡು ವರ್ಷ ಇದ್ದು ಬಿದ್ದ ಅಷ್ಟಿಷ್ಟು ಸೈನ್ಯವನ್ನು ಕಟ್ಟಿಕೊಂಡು ಕಂಪನಿಯ ಸೇನಾಪತಿಗಳನ್ನು ದಣಿಸಿ, ಸಾಕು ಎನ್ನಿಸಿದವನು ಯಾರೂ ಇಲ್ಲವೆನ್ನಬಹುದು. ಈ ದೃಷ್ಟಿಯಿಂದ ತಾತ್ಯಾನ ಯೋಗ್ಯತೆಯು ಎಲ್ಲ ವೀರಾಳುಗಳಲ್ಲಿ ಮೇಲ್ಮಟ್ಟದ್ದೆಂದು ಧಾರಾಳವಾಗಿ ಹೇಳಲಿಕ್ಕೇಬೇಕು.

## ಕಾನಪುರ ಕೈ ಬಿಟ್ಟನಂತರ

ನಾನಾಸಾಹೇಬನು ರಣರಂಗದಲ್ಲಿರುವವರೆಗೆ ತಾತ್ಯಾನು ಅವನ ಆಜ್ಞೆಗನುಸರಿಸಿ ಅಲ್ಲಲ್ಲಿಯ ದಂಡನ್ನು ತಂದು, ಹೋರಾಟದಲ್ಲಿ ನಾನಾಸಾಹೇಬನಿಗೆ ನಾನಾರೀತಿಯಿಂದ ಸಹಾಯ ಸಲ್ಲಿಸುತ್ತಲೇ ಇದ್ದನು. ತಾತ್ಯಾನ ಮಾತುಗಾರಿಕೆ ಮತ್ತು ಮಾಡುಗಾರಿಕೆಯಲ್ಲಿ ಒಂದು ತರದ ಮಿಂಚು ಇದ್ದುದರಿಂದ, ಅವನ ಮಾತಿಗೆ ಯಾರೂ ಎದುರು ನಿಲ್ಲುತ್ತಿರಲಿಲ್ಲ; ಹೀಗಾಗಿ, ಬೇಕಾದಲ್ಲಿ ಹೋಗಿ, ದಂಡಿನವರನ್ನು ತನ್ನ ಕಡೆಗೆ ತಿರುಗಿಸಿತರುವ ಎದೆಗಾರಿಕೆ ಇತ್ತು. ಮತ್ತು ಅಂತಹ ಕಾರ್ಯಕ್ಕೆ ಈಗ ತಕ್ಕ ಸಮಯವಿದ್ದಿತು. ನಾನಾಸಾಹೇಬನು ಬ್ರಹ್ಮಾವರ್ತದಿಂದ ಹೋದಬಳಿಕ, ತಾತ್ಯಾ ತನ್ನ ದಂಡಿನವರೊಡನೆ ಗಂಗೆಯನ್ನು ಈಸಿ, ತನ್ನ ಸ್ವಾಮಿಯನ್ನು ಕೂಡಿಕೊಂಡನು.

ಆದರೇನು? ಕಂಪನಿಯುವರೊಡನೆ ಹೋರಾಡಲು ಸಾಕಷ್ಟು ಸಾಧನ-ಸಾಮುಗ್ರಿ ಇರಲಿಲ್ಲ ಏನು ಮಾಡಬೇಕೆಂಬುವ ಯೋಚನೆ ಹತ್ತಿತು. ಶಿವ ರಾಜಪುರದಲ್ಲಿಯು ದಂಡಿನವರು ದಂಗೆ ಎಬ್ಬಿಸಿರುವ ಸುದ್ದಿಯು, ಆಗಲೇ ತಾತ್ಯಾನ ಕಿವಿಗೆ ಬಿದ್ದಿತ್ತು. ಆಗ, ಅವನು ತಟ್ಟನೆ ಅಲ್ಲಿಗೆ ಮಿಂಚಿನ ವೇಗ ದಿಂದ ಸಾಗಿ, ಆ ದಂಡಿನವರನ್ನು ತನ್ನ ಪಕ್ಷಕ್ಕೆ ಒಲಿಸಿಕೊಂಡನು. ಆಮೇಲೆ ಅದರ ನೆರೆಯಲ್ಲಿರುವ ಚರ್ಖಾರಿಯ ರಾಜನಿಗೆ ತಾತ್ಯಾ ಒಂದು ಚೀಟಿ ಬರೆದು, ಪೇಶವೆ ನಾನಾಸಾಹೇಬನು ಕೈಕೊಂಡಿರುವ ಧರ್ಮಯುದ್ಧದಲ್ಲಿ ನೆರವಾಗಲು ಕೇಳಿದನು. ಅವನು ಒಪ್ಪದ್ದರಿಂದ, ಚರ್ಖಾರಿಯನ್ನು ಮುತ್ತಿ, ಅವನಿಂದ ೨೪ ತೋಫುಗಳನ್ನು ಮತ್ತು ಮೂರು ಲಕ್ಷ ರೂಪಾಯಿಗಳನ್ನು ತೆಗೆದುಕೊಂಡನು. ಆಮೇಲೆ ಅವರ ನೆರವಿನಿಂದ ಕಾಲ್ಪಿ ಕೋಟೆಯನ್ನು ಗೆದ್ದು, ಅದನ್ನೇ ತನ್ನ ಮುಖ್ಯ ನಿಲ್ದಾಣವನ್ನಾಗಿ ಮಾಡಿಕೊಂಡನು. ಕಾಲ್ಪಿಯ ಕೋಟೆಯು ಬಹು ಭದ್ರ ಮತ್ತು ಕಾನಪುರ ಕಾಲ್ಪಿಯ ನಡುವೆ ಯಮುನಾ ಹೊಳೆ ಹರಿದಿರುವದರಿಂದ ದಂಡಿನ ದೃಷ್ಟಿಯಿಂದ ಅದು ಒಳ್ಳೇ ಆಯಕಟ್ಟಿನ ಸ್ಥಳವಾಗಿತ್ತು. ಇದನ್ನು ಮುಂಗಂಡು ತಾತ್ಯಾ ಟೋಪಿಯು ಅಲ್ಲಿ ಮದ್ದಿನ ಹಾಗೂ ದಂಡಿನವರಿಗೆ ಬೇಕಾಗುವ ಸಾಮುಗ್ರಿಗಳದೊಂದು ಹೊಸ ಕಾರಖಾನೆಯನ್ನು ತೆರೆದನು. ಅಲ್ಲಿಯ ವ್ಯವಸ್ಥೆಯನ್ನೆಲ್ಲ ದಕ್ಷತೆ ಯಿಂದ ನೋಡಿಕೊಳ್ಳಲಿಕ್ಕೆಂದು ನಾನಾಸಾಹೇಬನ ತಮ್ಮ ಬಾಳಾಸಾಹೇಬ ನನ್ನಿಟ್ಟು ತಾನು ವೇಷಾಂತರದಿಂದ ಗ್ವಾಲ್ಹೇರಕ್ಕೆ ನಡೆದನು. ದಾರಿಯಲ್ಲಿ ತನ್ನ ತಂದೆಯಿರುವ ಚರ್ಖಾ ಎಂಬ ಊರಿಗೆ ಹೋಗಿ, ತಂದೆಯ ಪಾದ ಗಳಿಗೆರಗಿದನು. ಮಗನ ಶೌರ್ಯದ ಕೀರ್ತಿಯನ್ನು ಕೇಳಿ, ಆ ಮುಪ್ಪಿನ ತಂದೆಯು ಕಂಬನಿಯಿಂದ ತನ್ನ ಆನಂದವನ್ನು ತೋರ್ಪಡಿಸಿದನು. ಆದರೆ ಬ್ರಿಟಿಶರಂತಹ ಬಲಾಢ್ಯ ರಾಜರೊಡನೆ ಸ್ವಾತಂತ್ರ್ಯ ಸಮರ ನಡೆಸಿದ ಸಾಹಸದಲ್ಲಿ ಮಗನ ಗತಿ ಏನಾಗುವದೋ ಎಂಬ ಎದೆಗುದಿ ಅವನಿಗೆ. ಇದರಿಂದ ಮಗನಿಗೆ ಬಹು ಎಚ್ಚರಿಕೆಯಿಂದಿರು ಎಂದು ಆಶೀರ್ವದಿಸಿ ಕಷ್ಟ ದಿಂದ ಕಳುಹಿದನು. ಅಲ್ಲಿಂದ ತಿರುಗಿ ಗ್ವಾಲ್ಹೇರದಲ್ಲಿಯ ದಂಡಿನವರು ಬಂಡುಗಾರರನ್ನು ಕೂಡಿಕೊಳ್ಳಲು ಆತುರರಿರುವ ವರ್ತಮಾನವನ್ನು ಅವನು

ಕೇಳಿ. ಅಲ್ಲಿಗೆ ಹೋಗಿ ಬಾಯಿ ಹಾಕುವದೊಂದೇ ತಡ, ಗ್ವಾಲ್ಹೇರದಲ್ಲಿಯ ಸೀಪಾಯರು, ಸವಾರರು, ತೋಫಖಾನೆಯವರು ಆವನನ್ನು ಹಿಂಬಾಲಿಸಲು ಒಪ್ಪಿಕೊಂಡರು. ಅವರನ್ನೆಲ್ಲ ಕಟ್ಟಿಕೊಂಡು, ದಾರಿಯಲ್ಲಿಯ ಊರುಗಳನ್ನು ಸುಲಿಯುತ್ತ ಗೆಲಿಯುತ್ತ ತಾತ್ಯಾ ಕಾಲ್ಪಿಗೆ ಬಂದು ತಲ್ಪಿದನು. ಈ ಸಂಧಿಯಲ್ಲಿ ಕಂಪನಿಯವರ ಸೇನಾಪತಿಯು ಕಾನಪುರದಲ್ಲಿರದೆ, ಲಖನೌ ಮುತ್ತಿಗೆಯಲ್ಲಿ ಸಿಕ್ಕ ಇಂಗ್ಲೀಷ ದಂಡಿನವರ ಸಹಾಯಕ್ಕೆ ಹೋಗಿದ್ದನು. ಕಾನಪುರದಲ್ಲಿ ಸಮರ್ಥರಾದ ಸೇನಾಪತಿಗಳಿಲ್ಲದ ಸಂಧಿಯನ್ನು ಸಾಧಿಸಿ, ತಾತ್ಯಾ ಕಾನಪುರದಮೇಲೆ ದಾಳಿನಡಿಸಿ, ಪೇಶವೆಯರ ಕೈಬಿಟ್ಟುಹೋದುದನ್ನು ಮತ್ತೆ ತನ್ನ ಶೌರ್ಯದಿಂದ ಗೆದ್ದನು. ಆ ದಾಳಿಯಲ್ಲಿ ತಾತ್ಯಾನಿಗೆ ೫ ಲಕ್ಷ ರೂಪಾಯಿ, ಹನ್ನೊಂದು ಸಾವಿರ ಮದ್ದಿನ ಗುಂಡಿನ ಪೆಟ್ಟಿಗೆಗಳು, ಐದುನೂರು ಡೇರೆಗಳು, ಸಾವಿರಾರು ಎತ್ತುಗಳು ವಿಪುಲವಾದ ಕಾಳುಕಡ್ಡಿ, ಆರಿವೆ-ಅಂಚಡಿ ಮುಂತಾದ ಸುಲಿಗೆ ಕೈ ಸೇರಿತು. ಈ ಗೆಲುವಿನಿಂದ ಬಂಡುಗಾರರ ಧೈರ್ಯ ಇಮ್ಮಡಿಗೊಂಡಿತು.

## ತಾತ್ಯಾನ ಚಟುವಟಿಕೆಗಳು

ಇದಾಗುವ ಹೊತ್ತಿಗೆ ಮಿರತ, ದಿಲ್ಲಿ ಮುಂತಾದೆಡೆಗಳಲ್ಲಿಯ ದಂಗೆಯು ಶಾಂತವಾಗಿ, ಅಲ್ಲಿ ತೊಡಗಿರುವ ಸೈನಿಕರು ಇತ್ತ ಕಡೆ ಕಳುಹಿಸಲ್ಪಟ್ಟರು. ಕಾನಪುರವು ತಮ್ಮ ಕೈಬಿಟ್ಟು ಹೋದದ್ದನ್ನು ಮರಳಿ ಹಿಡಿದುಕೊಳ್ಳಲು ಇಂಗ್ಲೀಷ ಸೇನಾಪತಿಗಳು ಬಗೆಬಗೆಯ ಪ್ರಯತ್ನ ನಡೆಸಿದರು. ಆದರೂ, ಇಂಗ್ಲೀಷ ಸೈನಿಕರು ಗಂಗೆಯನ್ನು ದಾಟಿ ಕಾನಪುರಕ್ಕೆ ಬರದಂತೆ ತಾತ್ಯಾ ಅಯೋಧ್ಯೆಯ ಬಳಿ ಇರುವ ಸೇತುವೆಯನ್ನು ಕೆಡುವಿ, ಆದರ ಸಮೀಪದಲ್ಲಿ ತೋಪುಗಳನ್ನಿರಿಸಿದನು. ಅಷ್ಟರಲ್ಲಿ ನಾನಾಸಾಹೇಬ ಮತ್ತು ಜಗದೀಶಪುರದ ಕುಮಾರಸಿಂಗ ಇವರೀರ್ವರು ಅಲ್ಲಿಗೆ ಬಂದರು. ಆಗ ಕಾನಪುರವನ್ನು ಬಿಟ್ಟು ಹೋಗುವದಕ್ಕಿಂತ, ಅಲ್ಲಿ ನಿಂತುಕೊಂಡು ಕಾದುವದೇ ಯೋಗ್ಯವೆಂದು ನಿರ್ಣಯಿಸಿದರು. ತಾತ್ಯಾನ ಕೈಯ್ಯಲ್ಲಿ ೧೦ ಸಾವಿರ ನುರಿತ ಸೈನಿಕರಿದ್ದರು. ಇಬ್ಬರಿಗೂ ಲಗ್ಗೆ ಹತ್ತಿತು. ಈ ಕಾದಾಟದಲ್ಲಿ ಗ್ವಾಲ್ಹೇರ ದಂಡಿನವರು ಹೆದರಿ

ಚದರಿದರು. ಅವರ ತೋಫುಗಳೆಲ್ಲ ಶತ್ರುಗಳ ಪಾಲಾದವು. ಇಂಗ್ಲೀಷರು ನಾನಾಸಾಹೇಬ ಮತ್ತು ತಾತ್ಯಾನನ್ನು ಹಿಡಿಯುಲು, ತಮ್ಮ ಸೈನಿಕರ ದಟ್ಟ ವಾದ ಜಾಳಿಗೆಯನ್ನೇ ಹರಡಿದ್ದರು. ಅವರು ಮುಂದೆ ಮುಂದೆ ನಡೆದಂತೆಲ್ಲ ಅವರನ್ನು ಇಂಗ್ಲೀಷ ದಂಡಿನವರು ಬೆಂಬತ್ತಿ ಬರುತ್ತಿದ್ದರು. ಇತ್ತ ಕಾಲಿನ್ ಎಂಬ ಸೇನಾಪತಿಯು ಬ್ರಹ್ಮಾವರ್ತಕ್ಕೆ ಹೋಗಿ, ಅಲ್ಲಿಯ ಅರಮನೆ ದೇವಾ ಲಯ ಮುಂತಾದವುಗಳನ್ನೆಲ್ಲ ನೆಲಸಮ ಮಾಡಿ, ಅಲ್ಲಿ ಸಿಕ್ಕ ಸುಲಿಗೆಯನ್ನೆಲ್ಲ ತಂದನು. ಕಾನಪುರವೂ ಮರಳಿ ಇಂಗ್ಲೀಷರ ಕೈಸೇರಿತು. ತಾತ್ಯಾ ತನ್ನ ಕೋಟೆಯಾದ ಕಾಲ್ಪಿಯಲ್ಲಿ ತಳಊರಿದನು. ಮುಂದೆ ಸ್ವಲ್ಪ ದಿನಗಳಲ್ಲಿಯೇ ಸರ ಹ್ಯೂರೋಜನು ಝಾಂಸಿಯನ್ನು ಮುತ್ತಿದ ವರ್ತಮಾನವನ್ನು ಕೇಳಿ, ತಾತ್ಯಾ ತನ್ನಲ್ಲಿರುವ ಸೈನ್ಯದೊಂದಿಗೆ ಅಲ್ಲಿಗೆ ಧಾವಿಸಿದನು. ಆದರಿಂದೇನೂ ಉಪಯೋಗವಾಗಲಿಲ್ಲ.

## ಮಧ್ಯಭಾರತದಲ್ಲಿ ತಾತ್ಯಾನ ಹಾವಳಿ!

ಝಾಂಸಿಯು ಇಂಗ್ಲೀಷರ ಕೈಸೇರಿ, ರಾಣಿಯೂ ರಣಾಂಗಣದಲ್ಲಿ ಕಾದಾಡುತ್ತ ತನ್ನ ದೇಹವನ್ನು ರಣಚಂಡಿಗೆ ಅರ್ಪಿಸಿದಮೇಲೆ, ಇಂಗ್ಲೀಷ ದಂಡಿನವರು ತಾತ್ಯಾನನ್ನು ಬೆನ್ನಟ್ಟಿದರು. ಆ ಸಮಯಕ್ಕೆ ತಾತ್ಯಾನಲ್ಲಿ ಏನೂ ಶಸ್ತ್ರ-ಸಾಮಗ್ರಿಯಾಗಲಿ, ದಂಡು-ದಳವಾಗಲಿ ಇರಲಿಲ್ಲ. ಕೆಲ ದಿವಸ ಅವನು ರಾವಸಾಹೇಬ ಪೇಶವೆಯೊಡನೆ ಮಧ್ಯಭಾರತದ ದಟ್ಟಡವಿಯಲ್ಲಿದ್ದು, ತನ್ನ ಕಾರ್ಯಕ್ರಮವನ್ನು ಗೊತ್ತುಮಾಡಿಕೊಂಡು, ತನ್ನಲ್ಲಿ ಏನೂ ಸಾಧನ-ಸಾಮಗ್ರಿ ಇಲ್ಲದ್ದರಿಂದ ಇಂಗ್ಲೀಷರೊಡನೆ ಹೋರಾಡದೆ, ತೆರೆಯ-ಮರೆಯಲ್ಲಿದ್ದುಕೊಂಡೇ ಅವರೊಡನೆ ಹೋರಾಡತಕ್ಕದ್ದು, ಅಲ್ಲಲ್ಲಿರುವ ಸಂಸ್ಥಾನಿಕರಿಗೆ ತಮಗೆ ಅವಶ್ಯವಿರುವ ಹಣ, ಮದ್ದು-ಗುಂಡು, ಶಸ್ತ್ರಾಸ್ತ್ರಗಳನ್ನು ಒದಗಿಸಿಕೊಳ್ಳ ತಕ್ಕದ್ದು ಎಂದು ಮುಂತಾಗಿ ಅವನ ಕಾರ್ಯದ ರೂಪರೇಖೆ ಇದ್ದಿತು. ಆ ಕಾಲ ದಲ್ಲಿ ತಾತ್ಯಾನ ಚಟುವಟಿಕೆಗಳು ಬಹು ಆಶ್ಚರ್ಯಕರವಿದ್ದವು. ಅಡ್ಡ ಮತ್ತು ಒಳ ದಾರಿಯಿಂದ ತಾತ್ಯಾ ದಿನವೊಂದಕ್ಕೆ ನೂರಾರು ಮೈಲುಗಳ ವರೆಗೆ ಓಡಾಡುತ್ತಿದ್ದನು. ಇಲ್ಲಿರುವನೆನ್ನುವಷ್ಟರಲ್ಲಿ ಇನ್ನೆಲ್ಲಿಯೋ ಹೋಗಿರುತ್ತಿದ್ದನು.

ಯಾವ ಕಾಲಕ್ಕೆ ಯಾವ ಊರಿಗೆ ಬಂದು, ಹಾವಳಿ ನಡಿಸುವನೆಂಬುದು ಗೊತ್ತಿರಲಿಲ್ಲ. ಒಳ್ಳೇ ಮಾತಿನಿಂದ ದೇಶ-ಧರ್ಮ ರಕ್ಷಣೆಗಾಗಿ ನಡಿಸಿರುವ ಮಹಾಕಾರ್ಯಕ್ಕಾಗಿ ಇದ್ದುಳ್ಳವರು, ಸಂಸ್ಥಾನಿಕರು ಕೊಡಗೈಯಿಂದ ನೆರವು ಕೊಟ್ಟರೆ ಸರಿ; ಇಲ್ಲದಿದ್ದರೆ ಅವರಿಂದ ಬಲುವೆಯಿಂದ ಹಣ, ಕಾಳು-ಕಡಿ, ಮುಂತಾದ್ದನ್ನು ಎತ್ತುತ್ತಿದ್ದನು. ಬಡವರಿಗೆ ಮಾತ್ರ ಅವನೆಂದೂ ಪೀಡಿಸಲಿಲ್ಲ. ರಜಪುತಸ್ಥಾನದಲ್ಲಿರುವ ಟೊಂಕ ಎಂಬ ಸಂಸ್ಥಾನದ ನವಾಬನನ್ನು ಹೆದರಿಸಿದಾಗ ಅವನಿಗೆ ಕೆಲವು ಸೈನಿಕರು, ಕೆಲವು ತೋಫುಗಳು, ಮತ್ತು ಅನ್ನ-ಸಾಮಗ್ರಿಗಳು ದೊರಕಿದ್ದರಿಂದ, ಅಷ್ಟರಿಂದಲೇ ಅವನು ದಕ್ಷಿಣಕ್ಕೆ ಸಾಗಲು ಸಮರ್ಥನಾದನು ಆ ಪ್ರಸಂಗದಲ್ಲಿ ನಾಲ್ಕೈದು ಮಂದಿ ಒಳ್ಳೇ ವೀರರಾದ ಸೇನಾಪತಿಗಳು ತಾತ್ಯಾನನ್ನು ಬೆನ್ನಟ್ಟಿದ್ದರೂ, ಅವನು ಅವರ ಕೈಗೆ ಸಿಗದೆ, ಸುಂಟರ ಗಾಳಿಯಂತೆ ಅತ್ಯಂತ ಕೌಶಲ್ಯದಿಂದ ಪಾರಾಗುತ್ತಿದ್ದನು. ಹೀಗೆ ಗಾಳಿಗೆ ಸಮನಾಗಿ ಓಡಾಡುತ್ತಿದ್ದುದರಿಂದ, ನಾ ನಾ ಎನ್ನುವ ವೀರಾಧಿ ವೀರರಾದ ಬಿಳಿಯ ಸೇನಾಪತಿಗಳನ್ನು ಎರಡೆರಡು-ಮೂರು ಮೂರು ನೂರು ಮೈಲುಗಳವರೆಗೆ ಇಲ್ಲಿ ಸಿಕ್ಕಾನು, ಅಲ್ಲಿ ಸಿಕ್ಕಾನು, ಎಂಬ ಭ್ರಮೆಯಲ್ಲಿ ಕುಣಿಸುತ್ತಿದ್ದನೆಂದರೂ ಸಲ್ಲುವದು. ಇಂದೂರು, ಝುಲರಾ ಪಟ್ಟಣ ಮುಂತಾದ ಕಡೆಯಲ್ಲಿ ಅವರು ನಡಿಸಿದ ಹಾವಳಿಗೆ ಎದುರಿಲ್ಲ. ಗುಡ್ಡ–ಬೆಟ್ಟ, ಅಡವಿ ಆರಣ್ಯ, ಗಿರಿ–ಕಂದರ, ಹಳ್ಳಿ–ಪಳ್ಳಿ, ಹೊಳೆ–ಹಳ್ಳ ಮುಂತಾಗಿ ಎಲ್ಲೆಡೆಯಲ್ಲಿಯೂ ತಾತ್ಯಾನ ವೀರ ಕಾರ್ಯಗಳ ಹೊಗಳಿಕೆಯೇ ಕೇಳಬರುತ್ತಿತ್ತು. ಇಂಗ್ಲೀಷ ಸೇನಾಪತಿಗಳು ತಮ್ಮ ಶಕ್ತಿ ಮೀರಿ ತಾತ್ಯಾನನ್ನು ಹಿಡಿಯಲು ಶ್ರಮಿಸುತ್ತಿದ್ದರೂ, 'ಆ ಮಹಾರಾಷ್ಟ್ರದ ಸಿಂಹವು' ಕೈಗೆ ಸಿಗದೆ ಇದ್ದುದಕ್ಕಾಗಿ ಒಂದೇ ಸವನೇ ಚಡಪಡಿಸುತ್ತಿದ್ದರು.

## ಮಿತ್ರನು ಶತ್ರುವಾದನು.

ಈ ಸಮಯಕ್ಕೆ ತಾತ್ಯಾ ಅಲ್ಲಲ್ಲಿ ಇಂಗ್ಲೀಷರ ಸಂಗಡ ಕೂಟ ಯುದ್ಧ ನಡಿಸಿ ಬೇಸತ್ತಿದ್ದನು. ಇನ್ನು ಕೆಲವು ದಿನಗಳವರೆಗೆ ಎಲ್ಲಿಯಾದರೂ ವಿಶ್ರಾಂತಿ ಪಡೆಯಬೇಕೆಂದು ತನ್ನೊಡನೆ ಇಬ್ಬರು ಅಡಿಗೆಯುವರು ಒಬ್ಬ

ಆಳು, ಎರಡು ಮೂರು ಕುದುರೆ ಇಷ್ಟು ಕಟ್ಟಿಕೊಂಡು ಗ್ವಾಲ್ಹೇರ ಮಾರ್ಗವಾಗಿ ಹೊರಟನು. ಗ್ವಾಲ್ಹೇರದಲ್ಲಿ ಮಾನಸಿಂಗ ಎಂಬ ಅವನೊಬ್ಬ ಜೀವದ ಗೆಳೆಯನಿದ್ದನು. ಅವನೂ ಈ ಹೊತ್ತಿಗೆ ಗ್ವಾಲ್ಹೇರ ನೆರೆಯಲ್ಲಿರುವ ಅರಣ್ಯದಲ್ಲಿ ಯಾರಿಗೂ ತಿಳಿಯದಂತೆ ಇರುತ್ತಿದ್ದನು. ಅವನಲ್ಲಿಗೆ ತಾತ್ಯಾ ಬಂದನು. ಮಾನಸಿಂಗನಾದರೂ ಪ್ರೀತಿಯಿಂದ ಸತ್ಕರಿಸಿ ಅವನಿಗಿರಲಿಕ್ಕೆ ಯೋಗ್ಯ ಸ್ಥಳವನ್ನು ಕಲ್ಪಿಸಿಕೊಟ್ಟನು, ತಾತ್ಯಾ ಮಾನಸಿಂಗನ ಆಶ್ರಯದಲ್ಲಿರುವ ಸುದ್ದಿ ಹೇಗೋ ಇಂಗ್ಲೀಷರಿಗೆ ತಿಳಿಯಿತು. ಮಾನಸಿಂಗನು ಹೀಗೆಲ್ಲ ತಾತ್ಯಾನ ಮಿತ್ರನಿದ್ದರೂ, ಹೇಗಾದರೂ ಮಾಡಿ, ತನಗೊಂದು ಜಹಗೀರಿಯನ್ನು ಗಳಿಸಿಕೊಳ್ಳಬೇಕೆಂಬ ಆಶೆ ಬಹುದಿವಸಗಳಿಂದ ಮನದಾಳದಲ್ಲಿ ಮಸೆಯುತ್ತಿತ್ತು. ಇಂಗ್ಲೀಷರಿಗೂ ತಾತ್ಯಾನನ್ನು ಈ ಬಗೆಯ ಮೋಸುಗಾರಿಕೆಯಿಂದ ಹಿಡಿಯದೇ ಬೇರೆ ದಾರಿ ಇರಲಿಲ್ಲ. ಆಗ, ಅವರು ಮಾನಸಿಂಗನೊಡನೆ ಸಂಧಿ ನಡಿಸಿದರು. ತಾತ್ಯಾನನ್ನು ಹಿಡಿದುಕೊಟ್ಟರೆ, ಮಾರವಾಡದ ಜಹಗೀರಿಯನ್ನು ಕೊಡುವ ಆಶೆ ಹಚ್ಚಿದರು. ಒಂದು ಕಾಲಕ್ಕೆ ತಾತ್ಯಾನೊಡನೆ ಇಂಗ್ಲೀಷರ ಸಂಗಡ ಹೋರಾಡಿದ್ದರೂ, "ಇನ್ನು ನಾನು ಇಂಗ್ಲೀಷರಿಗೆ ಶರಣು ಹೋಗಬಯಸುವೆ" ಎಂದನು. ಆಗ ತಾತ್ಯಾ ಹಾಗಾದರೆ ನಾನಿನ್ನು ಈ ಅಡವಿಯಲ್ಲಿ ಇರಲೋ, ಹೋಗಲೋ ನೀನು ಹೇಳಿದಂತೆ ನಡೆಯುವೆ ಎಂದು ಕೇಳಿದ್ದಕ್ಕೆ ಮಾನಸಿಂಗನು "ಸ್ವಲ್ಪ ದಿನ ತಡೆ. ಆ ಬಗೆಗೆ ಇಷ್ಟರಲ್ಲಿಯೇ ಏನೆಂಬುದನ್ನು ತಿಳಿಸುವೆ. ನಾನು ಮರಳಿ ಬರುವವರೆಗೆ ನೀನಿಲ್ಲಿಯೇ ಇರು." ಹೀಗೆಂದು ಅವನಿಗೊಂದು ಬೇರೆ ಏಕಾಂತ ಸ್ಥಳ ಕಲ್ಪಿಸಿಕೊಟ್ಟನು. ಮಾನಸಿಂಗನು ಇಂಗ್ಲೀಷರಿಗೆ ಶರಣು ಹೊಕ್ಕಿದ್ದರೂ ಆದೇಕೋ ತಾತ್ಯಾ ಅವನನ್ನೇ ತುಂಬ ನಂಬಿದ್ದನು. ಆದರೆ, ನಿಜವಾಗಿಯೂ ಮಾನಸಿಂಗ ಅಷ್ಟು ಮಟ್ಟಿಗಿನ ನಂಬಿಗೆಗೆ ಪಾತ್ರನಿರಲಿಲ್ಲ. ಇದರ ಪರಿಣಾಮವಾಗಿ ಮಾನಸಿಂಗನು ತಾತ್ಯಾನ ಅಪ್ಪಣೆ ಪಡೆದು ಹೊರಬಿದ್ದವನು ನೇರವಾಗಿ ಇಂಗ್ಲೀಷರ ರಾಜ್ಯಕ್ಕೆ ಹೋಗಿ, ತಾತ್ಯಾ ಅಡಗಿಕೊಂಡು ಇರುವ ಸ್ಥಳದ ಗೊತ್ತು ಗುರಿಗಳನ್ನೆಲ್ಲ ಮಾಡಿಕೊಟ್ಟು, ಮರಳಿ ಬಂದನು. ಮೂರನೆಯ ದಿನ ಮಧ್ಯರಾತ್ರಿಯ ಸಮಯ. ತಾತ್ಯಾನಿಗೆ ಗಾಢನಿದ್ರೆ. ಇಂಗ್ಲೀಷ

ಸಿಪಾಯರು ತಾತ್ಯಾನನ್ನು ಸೆರೆಹಿಡಿಯಲು ಸಜ್ಜಾಗಿ ಬಂದಿದ್ದರು. ಮಾನ ಸಿಂಗನು ಅವರಿಗೆ ತಾತ್ಯಾಇರುವ ಠಾವನ್ನು ತೋರಿಸಿದನು. ಸ್ವಲ್ಪ ಗದ್ದಲ ನಡೆಯಿತು. ತಾತ್ಯಾ ಕಣ್ತೆರೆದು ನೋಡಿದನು. ತಾನು ಇಂಗ್ಲೀಷರ ಸೆರೆಯಾಳಾಗಿರುವ ವಿದ್ಯಮಾನವು ಕಂಡುಬಂದಿತು. ಎಡೆಬಿಡದೆ ಒಂದು ವರ್ಷ ಕಾಲ ಸೆರೆಹಿಡಿಯಲು ಇಂಗ್ಲೀಷರು ಹಾತೊರೆಯುತ್ತಿದ್ದ ಸಿಂಹವು ಅಂದು ಫಿತೂರಿಯಿಂದ ಇಂಗ್ಲೀಷರ ಜಾಲದಲ್ಲಿ ಸಿಕ್ಕಿತು.

## ತಾತ್ಯಾನ ವಿಚಾರಣೆ ಮತ್ತು ಶಿಕ್ಷೆ

ಮರುದಿನ ಬೆಳಿಗ್ಗೆ ತಾತ್ಯಾನ ಕೈಗಳಿಗೆ ಬೇಡಿ ಹಾಕಿ ಅವನನ್ನು ಸಿಪ್ರಿಯಲ್ಲಿರುವ ಜನರಲ್ ಮೀಡ ಸಾಹೇಬನ ಮುಂದೆ ನಿಲ್ಲಿಸಿದರು. ಅಲ್ಲಿ ಅವನ ವಿಚಾರಣೆ ನಡೆದು, ಬ್ರಿಟಿಶ ಸರಕಾರದವರ ವಿರುದ್ಧ ಹೋರಾಟ ನಡೆಸಿದ ಆರೋಪವಿಟ್ಟರು. ಮೂರು ದಿನಗಳ ವರೆಗೆ ವಿಚಾರಣೆ ನಡೆದು, ಅವನಿಗೆ ಗಲ್ಲಿನ ಶಿಕ್ಷೆ ವಿಧಿಸಲಾಯಿತು. ಅವನ ವಿಚಾರಣೆ ಕೇಳಲಿಕ್ಕೆ ದಿನಾಲು ಸಾವಿರಾರು ಜನರು ಬರುತ್ತಿದ್ದರು. ಬಂದವರು ಅವನಿಗೆ ಅತ್ಯಂತ ವಿಶ್ವಾಸದಿಂದ ನಮಸ್ಕರಿಸುತ್ತಿದ್ದರು. ತನ್ನನ್ನು ಕೇಳಿದ ಪ್ರಶ್ನೆಗಳಿಗೆ ತಾತ್ಯಾ ಹಿಂದುಸ್ತಾನಿಯಲ್ಲಿಯೇ ನಾಲ್ಕೇ ಮಾತುಗಳಲ್ಲಿ ಒಳ್ಳೇ ಒಗರಿನಿಂದ ಉತ್ತರ ಕೊಡುತ್ತಿದ್ದನು. ಶಿಕ್ಷೆ ಹೇಳುವ ಮೊದಲು ವಾಡಿಕೆಯಂತೆ ಅವನು ತನ್ನ ಅಭಿಪ್ರಾಯವನ್ನು ಮಂಡಿಸುವಾಗ ಅಂದದ್ದು— "ನನ್ನ ಒಡೆಯನ ಆಜ್ಞೆಯಂತೆ ಹೋರಾಡಿದೆ, ಕಾಲ್ಪಿಯ ಯುದ್ಧದವರೆಗೂ ನಾನು ನಾನಾಸಾಹೇಬರ ಆಜ್ಞೆಯಲ್ಲಿಯೇ ಇದ್ದೆ. ನಮ್ಮ ಹೋರಾಟದಲ್ಲಿ ನಾನಾಗಲಿ, ನನ್ನ ಒಡೆಯನಾಗಲಿ ಇಂಗ್ಲೀಷರ ಗಂಡಸು–ಹೆಂಗಸು–ಮಕ್ಕಳನ್ನು ಕ್ರೂರ ರೀತಿಯಿಂದ ಕೊಲ್ಲಲಿಲ್ಲ. ಬ್ರಿಟಿಶರೊಡನೆ ಹೋರಾಡಿದ್ದಕ್ಕಾಗಿ, ನಾನಿಂದು ಸಾವಿಗೆ ಸಿದ್ಧನಾಗಿರಬೇಕಾದ ಜ್ಞಾನವು ನನಗಿದೆ. ಇದಕ್ಕಾಗಿ ಯಾವ ಕೋರ್ಟು ಬೇಡ. ವಿಚಾರಣೆಯೂ ಬೇಡ."

ಇಷ್ಟು ಆದ ಮೇಲೆ, 'ನಿನ್ನ ಕೊನೆಯ ಇಚ್ಛೆ ಏನಾದರೂ ಇದ್ದರೆ ಹೇಳು' ಎಂದು ಕೇಳಿದಾಗ ತಾತ್ಯಾ "ಏನೂ ಇಲ್ಲ. ನನ್ನ ಮುಪ್ಪಿನ ತಂದೆ

ಯುವರು ಇರುವರು, ಅವರಿಗೂ ನನ್ನ ಈ ಕಾರ್ಯಕ್ಕೆ ಸಂಬಂಧವಿರುವದಿಲ್ಲ. ನನ್ನ ತರುವಾಯ ಅವರಿಗೆ ಯಾವ ಬಗೆಯಿಂದಲೂ, ತೊಂದರೆ ಪಡಿಸಬಾರದು" ಎಂದು ಹೇಳಿದನು. ಅದೇ ದಿನ ಮಧ್ಯಾಹ್ನ ೪ ಘಂಟೆಗೆ ಅವನನ್ನು ಗಲ್ಲಿಗೇರಿಸುವ ಸ್ಥಳಕ್ಕೆ ಕರೆದೊಯ್ದರು. ಎದೆ ಬಿರಿಯುವ ಈ ನೋಟವನ್ನು ನೋಡಲಿಕ್ಕೆಂದು, ಸಾವಿರಾರು ಜನರ ದಟ್ಟಣೆಯಾಗಿತ್ತು. ಒಬ್ಬ ಸಿಪಾಯಿಯು ಅವನ ಕೈಕಾಲುಗಳನ್ನು ಬಿಗಿದ ಬೇಡಿಗಳನ್ನು ತೆಗೆದು, ಅತ್ಯಂತ ಶಾಂತ ಮುಖ ಮುದ್ರೆಯಿಂದ ತಾತ್ಯಾ ಗಲ್ಲಿನ ನಿಚ್ಚಣಿಕೆಯನ್ನೇರಿ, ಅಲ್ಲಿ ಕಟ್ಟಿರುವ ಹಗ್ಗದ ಉರ್ಲನ್ನು ತನ್ನ ಕೊರಳಿಗೆ ಸಿಕ್ಕಿಸಿಕೊಂಡನು. ಅಷ್ಟರಲ್ಲಿ ಇತ್ತಕಡೆಗೆ ನಿಂತಿರುವ ಆಳು ಅವನ ಕಾಲ್ಕೆಳಗಿರುವ ಹಲಗೆಯನ್ನು ಸರ‍್ರೆಂದು ಎಳೆದನು. ಕೂಡಲೇ ಉರ್ಲು ಬಿಗಿಯಾಗಿ, ಜೀವ-ಹಕ್ಕಿ ಹಾರಿತು.

ದೇಶದ ಸ್ವಾತಂತ್ರ್ಯಕ್ಕಾಗಿ ಹಗಲಿರುಳೆನ್ನದೆ, ಅಡವಿ-ಅರಣ್ಯಗಳಲ್ಲಿ ಒಂದು ದಿನ ಊಟವಿದ್ದರೆ, ಇನ್ನೊಂದು ದಿನ ಇಲ್ಲದೆ, ದಿನಕ್ಕೆ ನೂರಾರು ಮೈಲಾಗಳವರೆಗೆ ಓಡಾಡಿ ಹೋರಾಡಿದ, ಸ್ವಾತಂತ್ರ್ಯ ದೇವಿಯ ಅಮರ-ಪುತ್ರನ ಚೈತನ್ಯದಿಂದ ತುಂಬಿದ ದೇಹವು ಅಂತರಾಳದಲ್ಲಿ ತೂಗಾಡಹತ್ತಿತು! ಅವನಾ ನಿಶ್ಚೇತನವಾದ ತೂಗಾಡುತ್ತಿರುವ ಶರೀರವನ್ನು ನೋಡಿ ಹಲವರು ಕಣ್ಣೀರಿಟ್ಟರು; ಕೆಲವರು ಬಿಕ್ಕಿ-ಬಿಕ್ಕಿ ಅತ್ತರು; ಎಷ್ಟೋ ಜನರು ಉಸ್ಸೆಂದು ನಿಟ್ಟುಸಿರು ಬಿಟ್ಟು, ಏಳಲಾರದ ಕಾಲುಗಳನ್ನು ಹೇಗೋ ಎತ್ತಿ ಸಂಕಟ ಪಡುತ್ತ ತಮ್ಮ-ತಮ್ಮ ಮನೆಗಳಿಗೆ ನಡೆದರು.

ಈ ಮೇರೆಗೆ, ಈ ಸ್ವಾತಂತ್ರ್ಯಪುತ್ರನ ಕೊನೆ ಆಯಿತು. ಸ್ವಾತಂತ್ರ್ಯ ದೇವಿಯನ್ನು ಒಲಿಸಿ, ಪ್ರೀತಿಪಡಿಸುವದು ಬಹು ಕಷ್ಟವೆಂದು ಮಹಾತ್ಮರು ಆಡಿದ ನುಡಿ ಸುಳ್ಳಲ್ಲ.






## ತೇಜಸ್ವಿಯಾದ

# ೩. ಮೌಲವಿ ಅಹಮ್ಮದಶಹ

### ಅಯೋಧ್ಯಾಪ್ರಾಂತದ ಸೌಂದರ್ಯ

ಅಯೋಧ್ಯೆಯು ಶ್ರೀ ರಾಮಚಂದ್ರನ ಕಾಲದಿಂದಲೂ ಪ್ರಸಿದ್ಧವಿರುವ ಪ್ರಾಂತ. ಅದು ಮುಸಲ್ಮಾನ ನವಾಬರ ಆಳಿಕೆಗೆ ಸೇರಿದಮೇಲೆ ಕೂಡ ಅಷ್ಟೇ ಸುಂದರವಿದ್ದಿತು. ಬೇಕಾದಲ್ಲಿ ಹತ್ತಿಪ್ಪತ್ತು ಅಡಿಯಷ್ಟು ಭೂಮಿಯನ್ನು ಅಗಿಯುವದರೊಳಗಾಗಿ ಸಮೃದ್ಧಿಯಾಗಿ ನೀರು ಬೀಳುತ್ತಿದ್ದವು. ಮುಗಿಲಿಗೆ ಅಡರುವಷ್ಟು ಎತ್ತರವಾದ ಬಿದಿರುಮೆಳೆಗಳು ಆ ಪ್ರಾಂತದ ಅಡವಿಯಲ್ಲಿ ಕಿಕ್ಕಿರಿದಿದ್ದವು. ಗುಡ್ಡದಷ್ಟು ಆಕಾರದ ಮಾವಿನ ಹೆಮ್ಮರಗಳು ಹಚ್ಚನೆಯ ಎಲೆಗಳಿಂದ ಭೂಮಿಯನ್ನು ತಂಪುಗೊಳಿಸುತ್ತಿದ್ದವು. ಹುಣಿಸೆ

ಗಿಡದ ದಟ್ಟವಾದ ನೆರಳು, ಕಿತ್ತಳೆ ಹಣ್ಣಿನ ಗಿಡಗಳ ಸುವಾಸನೆ, ಹೂ-ಗಿಡ ಗಳಿಂದ ತುಂಬಿದ ತೋಟಗಳಿಂದ ಎಲ್ಲೆಡೆಯಲ್ಲಿ ಘಮಘಮಿಸುತ್ತ ಬೀಸುವ ಗಾಳಿ, ಇವಂತೂ ಮೊದಲೇ ನಿಸರ್ಗತ; ಸುಂದರವಿರುವ ಸೃಷ್ಟಿಸೌಂದ ರ್ಯಕ್ಕೆ ಇನ್ನಷ್ಟು ಸೊಬಗನ್ನು ತಂದುಕೊಡುತ್ತಿದ್ದವು

## ನವಾಬರ ಆಳಿಕೆ ನಷ್ಟವಾದಮೇಲೆ

**ಲಾರ್ಡ** ಡಾಲಹೌಸಿಯು ಅಯೋಧ್ಯೆಯ ನವಾಬರ ಆಳಿಕೆಯನ್ನು ಕಿತ್ತೊಗೆದು, ಅದನ್ನು ಬ್ರಿಟಿಶರಾಳಿಕೆಗೆ ಸೇರಿಸಿಕೊಂಡಮೇಲಂತೂ ಅಯೋ ಧ್ಯೆಯ ಸ್ಥಿತಿಯು ತೀರ ಕೆಟ್ಟುಹೋಯಿತು. ಇಂಗ್ಲೀಷರು ದೊಡ್ಡದೊಡ್ಡ ಜಮೀನದಾರರ ಇನಾಮುಗಳನ್ನೆಲ್ಲ ಕಸಿದುಕೊಂಡರು ಅಲ್ಲಿಯ ದೊಡ್ಡ ಜಮೀನದಾರರೆಲ್ಲರೂ ಹೆಚ್ಚಾಗಿ ರಜಪೂತ ವಂಶದ ವೀರರೇ ಇದ್ದರು. ಇದರಿಂದ ಅವರು ಅಸಂತುಷ್ಟರಾದರು. ಭೂಕಂದಾಯವನ್ನೇರಿಸಿದ್ದರಿಂದ ರೈತರು ಕ್ಷುಬ್ಧರಾದರು. ತಮ್ಮ ಒಡೆಯನಾದ ನವಾಬನನ್ನು ಮೋಸದಿಂದ ರಾಜಭ್ರಷ್ಟನನ್ನು ಮಾಡಿದಕ್ಕಾಗಿ ಜನಸಾಮಾನ್ಯರು ರೇಗಿದರು. ತಮ್ಮ ರಾಜ್ಯದೊಳಗೆ ಎಲ್ಲರಿಗೂ ಸರಕಾರಿ ಕೆಲಸ ಕೊಡುತ್ತೇವೆಂದು ಬ್ರಿಟಿಶರು ಒತ್ತಾಯಪಡಿಸಿ ಕರೆಯುತ್ತಿದ್ದರೂ ಸ್ವಾತಂತ್ರ್ಯಪ್ರೀಯರಾದ ಹಲವರು "ಸ್ವರಾಜ್ಯದ ಅನ್ನವನ್ನುಂಡು ಬೆಳೆದ ನಾವು ಪರಕೀಯರರಾದ ನಿಮ್ಮ ಅನ್ನವನ್ನು ಮುಟ್ಟಲಾರೆವು" ಎಂದು ಖಾಡಾಖಾಡಿಯಾಗಿ ಹೇಳುತ್ತಿದ್ದರು.

## ಫೈಜಾಬಾದ ಜಿಲ್ಹೆಯ ಹೀನ ಸ್ಥಿತಿ.

ಅಯೋಧ್ಯೆಯ ಪ್ರಾಂತದಲ್ಲಿ ಪೂರ್ವಕ್ಕಿರುವ ಫೈಜಾಬಾದ, ಸುಲ್ತಾನ ಪುರ, ಸಲೋನಿ ಈ ಜಿಲ್ಹೆಗಳ ಸ್ಥಿತಿಯು ಅತ್ಯಂತ ಶೋಚನೀಯವಾಗಿದ್ದಿತು. ಇವುಗಳಲ್ಲಿ ಫೈಜಾಬಾದವಂತೂ ಯಮಸದನವಾಗಿತ್ತು. ಅಲ್ಲಿ ದಂಡಿನ ನಿಲ್ದಾಣವಿರುವದರಿಂದ ದಿನಾಲು ನಡೆಯುವ ಕ್ರೂರ ಆಳಿಕೆಗೆ ಲೆಖ್ಖವಿರ ಲಿಲ್ಲ. ಆ ಜಿಲ್ಹೆಯಲ್ಲಿ ತಾಲೂಕದಾರರ ಸಂಖ್ಯೆಯೇ ಹೆಚ್ಚು. ಬ್ರಿಟಿಶರು ತಾಲೂಕದಾರರ ಕೈಯಲ್ಲಿದ್ದ ಹಳ್ಳಿಗಳನ್ನೆಲ್ಲ ಕಿತ್ತುಕೊಂಡು, ಅವರ ಕೋಟೆ

ಕೊತ್ತಳಗಳನ್ನು ಬೀಳಗೆಡವಿದರು. ಇವರಿಂದ ನಿನ್ನೆ ತಾನೇ ಅಮೀರರಿದ್ದವರು ಫಕೀರರಾದರು. ದೊಡ್ಡ-ದೊಡ್ಡ ಮನೆತನದವರು ಹೊಟ್ಟೆಗಾಗಿ ಹಳ್ಳಿ ಹಳ್ಳಿ ಅಲೆಯಲಾರಂಭಿಸಿದರು. ಎಲ್ಲೆಲ್ಲಿಯೂ ಅಸಂತೋಷದ ಬೇಗೆ ಹಬ್ಬಿತು ಫೈಜಾಬಾದ ಜಿಲ್ಹೆಯಲ್ಲಿ ಇಂತಹ ಭೀಕರ ಸ್ಥಿತಿಯಿರುವಾಗಲೇ ಮೀರತ ದಿಲ್ಲಿಗಳಲ್ಲಿ ಸಿಪಾಯರ ದಂಗೆ ಎಬ್ಬಿಸಿದ ಸುದ್ದಿ ಬಂದಿತು. ಅಲ್ಲಿರುವ ಇಂಗ್ಲೀಷ ದಂಡಿನವರ ಎದೆಗುಂಡಿ ಹಾರಹತ್ತಿತು ದಂಡಿನಲ್ಲಿ ಇಂಗ್ಲೀಷರಿಗಿಂತ ದೇಶೀಯ ಸಿಪಾಯಿಗಳೇ ಹೆಚ್ಚಾಗಿದ್ದುದರಿಂದ ಇನ್ನು ತಮಗೆ ಉಳಿಗಾಲವಿಲ್ಲವೆಂದವರು ರಾಜಾ ಮಾನಸಿಂಗ ಎಂಬ ಅಯೋಧ್ಯೆಯ ದೊಡ್ಡ ಜಮೀನದಾರ ಮುಖಂಡನಿಗೆ ಶರಣು ಹೊಕ್ಕರು. ಅವನು ಅವರಿಗೆ ಆಸರ ಕೊಟ್ಟನು.

## ಮೌಲವಿ ಅಹಮ್ಮದಶಹನಾರು ?

೧೮೫೭ ನೆಯ ಸ್ವಾತಂತ್ರ್ಯ ಸಂಗ್ರಾಮದೊಳಗೆ ಹೋರಾಡಿ ಮಿಂಚಿದ ಮಹಾವೀರರಲ್ಲಿ ಇವನೊಬ್ಬ. ಫೈಜಾಬಾದ ಜಿಲ್ಹೆಯಲ್ಲಿರುವ ಒಬ್ಬ ತಾಲೂಕದಾರ. ಇಂಗ್ಲೀಷರು ಎಲ್ಲರಂತೆ, ತನ್ನ ತಾಲೂಕದಾರಿಯನ್ನು ಕಸಿದುಕೊಂಡಿದ್ದರಿಂದ, ತನ್ನ ತಾಲೂಕದಾರಿಯನ್ನು ಮಾತ್ರವಲ್ಲದೆ, ತನ್ನ ಮಾತೃಭೂಮಿಯನ್ನೇ ಸ್ವತಂತ್ರಗೊಳಿಸುವ ಪಂಥ ತೊಟ್ಟವನು ತನ್ನ ತಾಲೂಕದಾರಿ ಕೈಬಿಟ್ಟುಹೋದಂದಿನಿಂದ ಅವನು ತನ್ನ ದೇಶ ಮತ್ತು ಧರ್ಮಕ್ಕಾಗಿ ಎಲ್ಲವನ್ನು ಸೂರೆಗೊಂಡಿದ್ದನು. ಮೈ-ಕೈಯಿಂದ ತೆಳ್ಳನ್ನ-ಬಡಕ ಮತ್ತು ಎತ್ತರ ಆಳಾಗಿದ್ದರೂ, ಕಣ್ಣಿನಲ್ಲಿ ಮಿಂಚು, ಮಾತಿನಲ್ಲಿ ಗುಡುಗಿನ ಗಾಂಭೀರ್ಯವಿತ್ತು. ಸ್ವಾತಂತ್ರ್ಯ ಸಂಗ್ರಾಮವು ಏಳುವ ಮೊದಲೇ ಇವನು ಮೌಲವಿಯಾಗಿ, ದೇಶದಲ್ಲಿ ಬಂಡಾಯ ಎಬ್ಬಿಸುವ ಉದ್ದೇಶದಿಂದ ಅಲ್ಲಲ್ಲಿ ಅಲೆಯುತ್ತಿದ್ದ ಜನರಿಗೆ ಉಪದೇಶ ಮಾಡುತ್ತಿದ್ದ, ಮಾತಿಗೆ ನಿಂತರೆ ಇವನು ಮೈಮರೆಯುವನಲ್ಲದೆ, ಹೋದಲ್ಲೆಲ್ಲ ಜನರೂ ಇವನ ಪ್ರಭಾವಶಾಲಿಯಾದ ಮಾತಿಗೆ ದಂಗಾಗಿ ಮೈಮರೆಯುವರು. ಸಿಪಾಯರ ದಂಗೆ ಏಳುವ ಕಾಲಕ್ಕೆ ಇವನು ಎಲ್ಲ ಮುಂದಾಳುಗಳನ್ನು ಕಂಡು, ಅವರೊಡನೆ ಮಾತು-ಕತೆ

ಯಾಡಿದ್ದನು ಆಗ್ರಾದಲ್ಲಿ ಇವನೊಂದು ಗುಟ್ಟಿನ ಸಂಘವನ್ನು ಸ್ಥಾಪಿಸಿದ್ದ ನಂತೆ. ಲಖನೌದಲ್ಲಿರುವಾಗ ಒಮ್ಮೆ ಇವನು ಬ್ರಿಟಿಶ ರಾಜ್ಯವನ್ನು ನಾಶ ಮಾಡದೆ, ಗತ್ಯಂತರವಿಲ್ಲವೆಂದು ಬಹಿರಂಗವಾಗಿಯೇ ಬೋಧಿಸಿದ್ದನು; ಮೌಲವಿಯು ಇಷ್ಟಕ್ಕೆ ನಿಲ್ಲದೆ, ಮುಂದೆ ಕೈಯ್ಯಲ್ಲಿ ಲೆಕ್ಕಣಿಕೆಯನ್ನು ತೆಗೆದು ಕೊಂಡು, ಆಯೋಧ್ಯೆಯ ಪ್ರಾಂತದಲ್ಲೆಲ್ಲ ರಾಜ್ಯ ಕ್ರಾಂತಿಯ ಸ್ಫೂರ್ತಿ ದಾಯಕ ಬರಹಗಳನ್ನು ಬರೆದು, ಹಂಚತೊಡಗಿದನು. ಇದಕ್ಕಾಗಿ ಬ್ರಿಟಿ ಶರು ಅವನನ್ನು ಸೆರೆಹಿಡಿದು, ವಿಚಾರಣೆ ನಡಿಸಿ, ರಾಜದ್ರೋಹದ ಆರೋಪ ವಿಟ್ಟು, ಗಲ್ಲಿಗೇರಿಸುವ ಶಿಕ್ಷೆ ವಿಧಿಸಿದರು; ಮತ್ತು ಆನಿಯಮಿತ್ತದಿಂದ ಕೆಲ ದಿನ ಫೈಜಾಬಾದ ಸೆರೆಮನೆಯಲ್ಲಿಟ್ಟರು. ಇದರ ಪರಿಣಾಮವಾಗಿ, ಫೈಜಾ ಬಾದ ಊರಿಗೆ ಊರೇ ದಂಗೆ ಎದ್ದಿತು. ದಂಡಿನ ಸೀಪಾಯರು ಇಂಗ್ಲೀಷ ಅಧಿಕಾರಿಗಳ ಮಾತು ಕೇಳದಾದರು. ಎಲ್ಲರೂ ಕೂಡಿ ತಮ್ಮ ನಾಯಕ ನಾದ ಮೌಲವಿಯನ್ನಿಟ್ಟ ಸೆರೆಮನೆಗೆ ನುಗ್ಗಿ, ಬಾಗಿಲುಗಳನ್ನು ಮುರಿದು ಹಾಕಿದರು. ಮೌಲವಿಯಾದರೂ ಜನರ ಸಂಭ್ರಮ ಮತ್ತು ಉತ್ಸಾಹಗಳಿಂದ ಮೈಮರೆತು, ತನ್ನ ಕೈಗಳನ್ನು ಬಿಗಿದಿರುವ ಬೇಡಿಗಳನ್ನು ಹರಿದೊಗೆದು, ಕೂಗುತ್ತ, ಘೋಷಿಸುತ್ತ, ಜನರನ್ನು ಕೂಡಿಕೊಂಡನು. ಇದೊಂದು ಬಗೆ ಯಿಂದ ಮೌಲವಿಯ ಪುನರ್ಜನ್ಮವೇ ಇದ್ದಿತು.

## ಮೌಲವಿಯ ತೇಜಸ್ಸು

ಮೌಲವಿಯು ಸೆರೆಮನೆಯಿಂದ ಹೊರಬಿದ್ದೊಡನೆ ಇಂಗ್ಲೀಷ ಅಧಿ ಕಾರಿಗಳಿಗೆಲ್ಲ ಫೈಜಾಬಾದದಿಂದ ಹೊರ ಹೊರಡಲು ಎಚ್ಚರಿಕೆ ಕೊಟ್ಟನು. ಊರಲ್ಲಿ ಯಾವ ಬಗೆಯ ಸುಲಿಗೆ ದಂಗೆಗಳಾಗಬಾರದಂತೆ ಅಲ್ಲಲ್ಲಿ ಸೀಪಾ ಯಿಗಳ ಕಾವಲಿಟ್ಟನು. ಅಲ್ಲಿರುವ ಕೆಲ ದಂಡಿನ ಸೀಪಾಯರು ಇಂಗ್ಲೀಷ ಅಧಿಕಾರಿಗಳನ್ನು ಕೊಲ್ಲಬೇಕೆಂದು ನಿಶ್ಚಯಿಸಿದ್ದರೂ, ಅದನ್ನು ನಿರ್ಬಂಧಿಸಿ ಆಸ್ತಿ-ಪಾಸ್ತಿ ಸಹಿತವಾಗಿ ಬೇಕಾದಲ್ಲಿ ಹೋಗಲು ಅಪ್ಪಣೆ ಕೊಟ್ಟಿದ್ದಲ್ಲದೆ, ಹೋಗಲಿಕ್ಕೆ ತಕ್ಕ ಅನುಕೂಲತೆಯನ್ನು ಕಲ್ಪಿಸಿ ಕೊಟ್ಟನು. ಅಂದಿನಿಂದ ಫೈಜಾಬಾದವು ಸ್ವತಂತ್ರವಾಯಿತು. ಮೊದಲಿನ ನವಾಬನು ವಾಜೀದಲ್ಲೀ

ಶಹನೇ ತಮ್ಮ ಅರಸು ಎಂದು ಎಲ್ಲಲ್ಲಿಯೂ ಡಂಗುರ ಹೊಡಿಸಿದನು. ಇಷ್ಟೇ ಇಲ್ಲ. ಇಷ್ಟು ಅನಾಹುತವು ನಡೆದ ಒಂದು ವಾರದಲ್ಲಿಯೇ ಅಯೋಧ್ಯಾ ಪ್ರಾಂತದಲ್ಲಿಯ ರೈತರು, ವರ್ತಕರು, ಬಗೆ–ಬಗೆಯ ಕಸಬುದಾರರು, ಜಮೀನದಾರರು, ರಾಜರು, ಹಿಂದೂಗಳು, ಮುಸಲ್ಮಾನರು ಎಲ್ಲರೂ ಒಂದು ದೇಹದ ಅವಯವಗಳಂತೆ ಎದ್ದು, ಬ್ರಿಟಿಶರ ಧ್ವಜವನ್ನು ಹರಿದು ಹಾಕಿ, ತಮ್ಮ ಪ್ರಾಂತವನ್ನು ಸ್ವತಂತ್ರ ಮಾಡಿದರು. ಎಲ್ಲಿಡೆಯಲ್ಲಿರುವಂತೆ, ಅಯೋಧ್ಯೆಯ ಪ್ರಾಂತದಲ್ಲಿಯೂ ಇಂಗ್ಲೀಷರ ಬಗ್ಗೆ ದ್ವೇಷವಿದ್ದರೂ, ಕ್ರಾಂತಿಕಾರಕರು ಉಪಟಳಕ್ಕೆ ಸಿಲುಕಿದಾಗ ಜನರು ಅವರನ್ನು ಅತ್ಯಂತ ದಯೆಯಿಂದ ರಕ್ಷಿಸುತ್ತಿದ್ದರು. ಇಂತಹ ಹಲವು ದೃಷ್ಟಾಂತಗಳಿವೆ.

## ಆಲಂಬಾಗದ ಕದನ

ಕಾನಪುರವನ್ನು ಗೆದ್ದಮೇಲೆ, ಸರ್ ಕಾಲಿನ್ನನು ತನ್ನ ದೊಡ್ಡ ಸೈನ್ಯದೊಂದಿಗೆ ಗಂಗೆಯನ್ನು ದಾಟಿ, ಲಖನೌದ ಮೇಲೆ ಸಾಗಿದನು. ಆ ಹೊತ್ತಿಗೆ ಲಖನೌದಲ್ಲಿಯ ರಾಜರನ್ನು ಮೊದಲುಗೊಂಡು ಬೀದಿಯಲ್ಲಿಯ ರೈತರು ಭಿಕ್ಷುಕರವರೆಗೆ ಎಲ್ಲ ತಮ್ಮ ರಾಜ್ಯರಕ್ಷಣೆಗಾಗಿ ಪ್ರಾಣವನ್ನು ಕೈಯಲ್ಲಿ ಹಿಡಿದುಕೊಂಡೇ ನಿಂತಿದ್ದರೆನ್ನಬಹುದು. ಅವರಿಗೆಲ್ಲ ತಮ್ಮ ಮನೆತನ, ತಮ್ಮ ಆಸ್ತಿ ಇವುಗಳಿಗಿಂತ ಪರರಾಯರ ಆಳಿಕೆಯ ವಿಷಯದಲ್ಲಿ ತುಂಬ ಜಿಗುಪ್ಸೆ ಇದ್ದಿತು. ಕಾಲಿನ್ನನು ಲಖನೌದ ಮೇಲೇರಿ ಹೋಗುವವನಿರುವ ಸುದ್ದಿಯನ್ನು ಕೇಳಿ ಅಹಮ್ಮದಶಹನು ಭರ್ರನೆ ಹದ್ದೆರಗಿದಂತೆ ಅಲ್ಲಿಗೆ ಬಂದನು. ಆಗ ಲಖನೌ ಅರಮನೆಯಲ್ಲಿ ಬೇಗಮಳ ಹೊರತಾಗಿ ಮತ್ತಾರೂ ಹೊಣೆಗಾರರು ಇರಲಿಲ್ಲ. ಹೀಗಿದ್ದರೂ, ಕ್ರಾಂತಿಕಾರರನ್ನು, ಬೇರೆಯವರನ್ನು ಕೂಡುಹಾಕಲಿಕ್ಕೆ ಆಕೆಯ ಪ್ರಯತ್ನ ಸಾಲದ್ದರಿಂದ ಬೇಗಮಳಿಗೆ ಸಹಾಯ ಮಾಡುವದರಲ್ಲಿ ಮೌಲ್ವಿಯು ರಾತ್ರಿ-ಹಗಲು ಮಾಡಿದುಡಿದನು. ಜನರಲ್ಲಿ ಚೈತನ್ಯ ತುಂಬುವ ಮಾತಿನಿಂದ ಅವನು ಎಲ್ಲರನ್ನು ಬಡಿದೆಬ್ಬಿಸಿದನು. ಶಿಪಾಯರಲ್ಲಿಯಂತೂ ಅವನ ವರ್ಚಸ್ಸು ವಿಪರೀತವಾಗಿತ್ತು. ಆಲಂಬಾಗವನ್ನು ಮುತ್ತಿದಾಗ, ಮೌಲವಿಯು ಅದನ್ನು ಕಾಪಾ

ಡಲಿಕ್ಕೆ ಮೀರಿ ಹೋರಾಡಿದನು. ಆಲಂಬಾಗಕ್ಕಾಗಿ ಹೋರಾಡುವ ಸೈನಿಕರಿಗೆ ಬೆಂಬಲ ಕೊಡಲು ಕಾನಪುರದಿಂದ ಇಂಗ್ಲೀಷ ಸೈನ್ಯ ಬರುತ್ತಿರುವ ಸಂಗತಿಯನ್ನು ಕೇಳಿ, ಅವನು ಕಾನಪುರ ದಾರಿಗೆ ತನ್ನ ಜನರನ್ನು ಕಟ್ಟಿಕೊಂಡು ಅಲ್ಲಿಗೆ ಧಾವಿಸಿದನು. ಈ ಸುದ್ದಿಯು ಇಂಗ್ಲೀಷ ದಳವಾಯಿಗೆ ಗೊತ್ತಾದೊಡನೆ, ಮತ್ತೊಂದು ಸೈನ್ಯದ ಗುಂಪನ್ನು ಮೌಲವಿಯನ್ನು ಮುರಿಬಡಿಯಲು ಕಳಿಸಿದನು. ದಾರಿಯಲ್ಲಿಯೇ ಅವರವರಿಗೆ ಲಗ್ಗೆಹತ್ತಿತು. ಆ ಕಾಳಗದಲ್ಲಿ ಮೌಲಿಯ ಕೈಗೆ ಗುಂಡುತಾಕಿ ಬಿದ್ದನು. ಅವನನ್ನು ಸೆರೆಹಿಡಿಯಲು ಇಂಗ್ಲೀಷರು ಬರುತ್ತಿರುವಷ್ಟರಲ್ಲಿ, ಕ್ರಾಂತಿಕಾರರು ತೊಟ್ಟಿಲಲ್ಲಿ ಹಾಕಿಕೊಂಡು, ಅವನನ್ನು ಲಖನೌವಿಗೆ ಒಯ್ದರು. ಅಹಮ್ಮದಶಹನು ತಾನು ನಡೆಯಿಸಿದ ಕದನವನ್ನು ಅತ್ಯಂತ ಶೌರ್ಯದಿಂದ ನಡಿಸಲು ಹೇಳಿ ನಡೆದನು ಅಲ್ಲಿ ಹೋರಾಡುವ ವೀರಾಳುಗಳಲ್ಲಿ ವಿದೇಶಿ ಹನುಮಾನ ಎಂಬ ಬ್ರಾಹ್ಮಣನಿದ್ದನು. ಅವನು ಇಂಗ್ಲೀಷರ ಸೈನಿಕರಮೇಲೆ ಹಲ್ಲೆನಡಿಸಿ ಬೆಳಗಿನ ೧೦ ಗಂಟೆಯಿಂದ ಸಂಜೆಯ ೬ ರ ವರೆಗೆ ದಂಡಿನಮುಂದಡೆಯಲ್ಲಿಯೇ ನಿಂತು, ಶತ್ರುಗಳನ್ನು ಸರಸರನೆ ಸವರುತ್ತ ಕಾದಿದನು. ತನ್ನ ಪ್ಪೆಯಲ್ಲಿ ಸ್ವಲ್ಪ ಗುಣವೆನಿಸಿದೊಡನೆ ಮತ್ತೆ ಮೌಲವಿಯು ಕಾದಾಟಕ್ಕೆ ಬಂದನು. ಆದರೂ, ಅದರಲ್ಲೇನೂ ಹಿಂದುಗಳಿಗೆ ಜಯವಾಗಲಿಲ್ಲ.

## ಮೌಲವಿಯ ಗುಟ್ಟಿನ ಸಂಗ್ರಾಮ

ಬಂಡಾಯದ ಗುಂಪುಗಳು ಉತ್ತರ ಹಿಂದುಸ್ತಾನದ ಎಲ್ಲ ಭಾಗಗಳಲ್ಲಿ ಹರಡಿಕೊಂಡಿದ್ದವಷ್ಟೇ! ಬ್ರಿಟಿಶರು ಅಲ್ಲಲ್ಲಿಯ ಕ್ರಾಂತಿಕಾರರನ್ನು ಸೋಲಿಸಿ, ಮುರಿಬಡಿದು, ಅಟ್ಟಿದಂತೆಲ್ಲ ಅವರು ಸುರಕ್ಷಿತವಿರುವ ಸ್ಥಳಗಳಿಗೆ ಬಂದು ಒಟ್ಟಾಗುತ್ತಿದ್ದರು. ಲಖನೌ ಕೇಂದ್ರವು ಮುರಿದಮೇಲೆ ಎಲ್ಲ ಕ್ರಾಂತಿಕಾರರು ಅಯೋಧ್ಯೆ ಮತ್ತು ರೋಹಿಲಖಂಡಗಳನ್ನು ಸೇರಿದರು. ಇಷ್ಟೇ ಅಲ್ಲದೆ, ಬಿಹಾರ ಪ್ರಾಂತದಿಂದಲೂ ಅನೇಕರು ಬಂದಿದ್ದರು. ಇಂಗ್ಲೀಷರ ದಂಡಿನವರನ್ನು ಎದುರಿಸುವಷ್ಟು ಶಕ್ತಿಯು ಕ್ರಾಂತಿಕಾರರಲ್ಲಿ ಉಳಿಯದ್ದರಿಂದ, ಕೊಟೆಯುದ್ಧಗಳನ್ನು ನಡಿಸದೆ ಬೇರೆ ಗತಿಯಿರಲಿಲ್ಲ. ಅದು ಕಾರಣ

"ಇಂಗ್ಲೀಷರ ದಂಡಿನವರ ಚಟುವಟಿಕೆಗಳನ್ನು ನಿರೀಕ್ಷಿಸಿ, ಅಲ್ಲಲ್ಲಿಯ ಓಡ್ಯಾಟಕ್ಕೆ ಅಡ್ಡಿಮಾಡಿರಿ. ಅನ್ನಸಾಮಗ್ರಿಗಳು ಅವರಿಗೆ ಹೋಗಿ ತಲ್ಪದಂತೆ ದಾರಿ ಕಟ್ಟುಮಾಡಿರಿ; ಟಪಾಲ ಮತ್ತು ತಂತಿಗಳನ್ನು ಕಿತ್ತುಹಾಕಿರಿ; ಅವರಿರುವ ಠಾಣ್ಯದ ಸುತ್ತುಮುತ್ತು ಕಣ್ಣಿಡಿರಿ" ಮುಂತಾಗಿ ಕ್ರಾಂತಿಕಾರರು ಎಲ್ಲರನ್ನು ಕುರಿತು ಪ್ರಕಟನೆ ಹೊರಡಿಸಿದರು.

ಬೌರಿ ಎಂಬ ಒಂದು ಹಳ್ಳಿಯಲ್ಲಿ ಮೌಲವಿಯು ತಳಊರಿ, ಅಲ್ಲಿಂದಲೇ ತನ್ನ ತುಂಡುಯುದ್ಧದ ಕೆಲಸಗಳನ್ನೆಲ್ಲ ಚಾಕಚಕ್ಯದಿಂದ ನಡಿಸಿದ್ದನು. ಈ ವರ್ತಮಾನವು ಹೇಗೋ ಇಂಗ್ಲೀಷರಿಗೆ ತಿಳಿದು, ಹೋಪ್‌ಗ್ರ್ಯಾಂಟ ಎಂಬ ಸೇನಾನಾಯಿಕನನ್ನು ಬೌರಿಯಮೇಲೆ ದಾಳಿನಡಿಸಲು ಕಳಿಸುವ ಸುದ್ದಿಯು ಮೌಲವಿಗೆ ಗೊತ್ತಾಯಿತು. ಆದರೆ ಇಂಥ ಸಣ್ಣಪುಟ್ಟ ಬೆದರಿಕೆಗೆ ಅವನು ಸೊಪ್ಪುಹಾಕುವವನಲ್ಲ ಅವನ ಕೈಯಲ್ಲಿ ಹಲವು ಜನ ಸೈನಿಕರಿದ್ದರು. ಅವರಲ್ಲಿ ಚಾಣಾಕ್ಷರಾದವರನ್ನು ಕರೆದು, ಬ್ರಿಟಿಶ ಸೈನ್ಯದಲ್ಲಿ ನಡೆದ ವಿದ್ಯಮಾನವನ್ನು ತಿಳಿದು, ಅಲ್ಲಿರುವ ಸೀಪಾಯರಲ್ಲಿ ಒಡಕು ಹುಟ್ಟಿಸುವ ಮಹತ್ವದ ಕೆಲಸವನ್ನು ಅವರಿಗೆ ಒಪ್ಪಿಸಿದನು. ಅವರಾದರೂ ದೇಶಕಾರ್ಯಕ್ಕಾಗಿ ತಮ್ಮ ಜೀವವನ್ನೇ ಮುಡಿಪಾಗಿಟ್ಟವರು! ಅಂದಮೇಲೆ ಕೇಳುವದೇನು? ಅದೇ ರಾತ್ರಿ ಅವರು ಹಿಂದು ಮುಂದು ನೋಡದೆ ಇಂಗ್ಲೀಷರ ಠಾಣ್ಯದಲ್ಲಿ ಹೊರಟರು. ದಂಡಿನ ಕಾವಲಿಗರು ಯಾರು? ಏನು ಎಂದು ಕೇಳಿದಾಗ "ನಾವು ಹನ್ನೆರಡನೆಯ ಗುಂಪಿನಲ್ಲಿಯ ಸೈನಿಕರು" ಎಂದು ನಿಜವಾಗಿ ಇದ್ದವರಂತೆಯೇ ಸಹಜವಾಗಿ ಉತ್ತರ ಕೊಟ್ಟು ಒಳಹೊಕ್ಕರು. ಅವರು ಅಲ್ಲಿದ್ದು, ಶತ್ರುಗಳು ಕೈಕೊಳ್ಳಲಿರುವ ಎಲ್ಲ ಸಂಗತಿಗಳನ್ನು ತಿಳಿದು ತಮ್ಮ ನಾಯಕನಿಗೆ ವಿವರಿಸಿದರು. ಆಗ, ಮೌಲವಿಯು ಲಗುಬಗೆಯಿಂದ ತನ್ನ ಸೈನಿಕರನ್ನು ಕಳಿಸಿ, ಬಾರಿಯ ಹತ್ತರಿನ ಒಂದು ಹಳ್ಳಿಯನ್ನು ವಶಪಡಿಸಿಕೊಂಡು, ಅಲ್ಲಿ ಕಾಯಲು ತನ್ನದೊಂದು ಚಿಕ್ಕ ಕಾಲ್ದಳವನ್ನಿಟ್ಟನು ಶತ್ರುಗಳು ಬಾರಿಯ ಮೇಲೆ ಹಲ್ಲೆ ನಡಿಸಿದರೆ ಈ ದಳವಲ್ಲದೆ, ಮತ್ತೊಂದು ಕುದರೆ ಸವಾರರ ದಳವನ್ನು ಸಹಾಯಕ್ಕೆ ಕಳಿಸಲು ಸಜ್ಜುಗೊಳಿಸಿದನು. ಈ ಕುದುರೆ ದಳದವರು ಯಾರಿಗೂ ತಿಳಿಯದಂತೆ ಅಡ್ಡ

ದಾರಿಯಿಂದ ಹೋಗಿ ಹಿಂದಿನಿಂದ ಶತ್ರುಗಳ ಮೇಲೆ ಬೀಳಬೇಕೆಂದು ಗೊತ್ತಾಗಿತ್ತು. ಮೌಲವಿಯ ಈ ಹಂಚಿಕೆಯು ಅತ್ಯಂತ ಚಾತುರ್ಯದ್ದಿದ್ದು ಅವನೀ ದಾಳಿಯ ಜಾಣತನವನ್ನು ಯುರೋಪಿಯ ಗ್ರಂಥಕಾರರು ಸಹ ಬಾಯ್ತುಂಬ ಹೊಗಳಿರುವರು.

## ದುರ್ದೈವದ ಮುಂದೆ ಓಡುವರಾರು?

ಆದರೆ, ನಮ್ಮ ಸೈನಿಕರಿಗೆ ಯಾವಾಗಲೂ ತಮ್ಮ ನಾಯಕನು ಹೇಳಿರುವದಕ್ಕಿಂತ ಹೆಚ್ಚಿನ ಕಾರ್ಯಮಾಡಿ ತೋರಿಸಿ, ಭಾಪು ಎನ್ನಿಸಿಕೊಳ್ಳುವ ಹುಚ್ಚು ಲವಲವಿಕೆಯು ಉಕ್ಕುತ್ತಿರುತ್ತದೆ. ಆದರಿಂದಲೇ ಎಷ್ಟೋ ಕಾರ್ಯಗಳು ಕೈಗೂಡುವದರಲ್ಲಿಯೇ ಕೆಟ್ಟು ಹೋಗುವದುಂಟು. ಇಂಥ ಸಂಗತಿಗಳು ಹಿಂದೆ ಎಷ್ಟೋಸಲ ಒದಗಿರುವವು. ಅದೇ ಈಗ ಕೂಡ ಒದಗಿತು. ಶತ್ರುಗಳು ಬರುವ ದಾರಿಯ ಮುಂಬದಿಯಲ್ಲಿಯೇ ಒತ್ತಟ್ಟಿಗೆ ಅಡಗಿಕೊಂಡು ಕುಳಿತಿರುವ ಕುದುರೆಯ ಸವಾರರಿಗೆ ಅಹಮ್ಮದಶಹನು "ನೀವು ನಿಮ್ಮ ಸ್ಥಳವನ್ನು ಬಿಟ್ಟು, ಶತ್ರುಗಳು ಬರುವವರೆಗೆ ಅಲ್ಲಾಡ ಬೇಡಿರಿ" ಎಂದು ಅಪ್ಪಣೆ ಕೊಟ್ಟಿದ್ದರೂ, ಅವರು ತಮ್ಮ ನೆರೆಯಲ್ಲಿಯೇ ಯಾರೂ ನೋಡದಂತೆ ಬಿದ್ದಿರುವ ಕೆಲವು ತೋಫುಗಳನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಲು ಅವಸರ ಮಾಡಿದರು. ಇದರ ಸುಳಿವನ್ನೇ ಕಂಟಿಯಲ್ಲಿ ಅಡಗಿ ನೋಡುತ್ತಿದ್ದ ಇಂಗ್ಲೀಷ ದಳದವರು, ಶತ್ರುಪಕ್ಷದವರು ಅಡಗಿರುವದನ್ನು ತಿಳಿದು, ಆ ಸ್ಥಳದಲ್ಲಿಯೇ ಮೊತ್ತ ಮೊದಲು ದಾಳಿಯನ್ನು ಮಾಡಿದರು. ತಾನು ಹಾಕಿದ ಹೊಂಚನ್ನು ಈ ಮೇರೆಗೆ, ಕುದುರೆಯ ದಳದವರು ಗಡಿಬಿಡಿಯಿಂದ ಕೆಡಿಸಿದ್ದಕ್ಕಾಗಿ, ಮೌಲವಿಗೆ ಬಹಳ ವಿಷಾದವಾಯಿತು; ಆದರೆ, ಅವನು ಕಲ್ಲೆದೆಯ ಕಲಿ ಇರುವದರಿಂದ, ಅವರ ತಪ್ಪನ್ನು ಕ್ಷಮಿಸಿ, ಕೂಡಲೇ ಅಲ್ಲಿಂದ ಕಾಲ್ದೆಗೆಯಲು ತನ್ನ ದಂಡಿನವರಿಗೆ ಆಜ್ಞಾಪಿಸಿದನು. ವೀರರು ಎಡರುಗಳಿಂದ ಎದೆಗುಂದುವದಿಲ್ಲ; ಅವರೆದೆ ಮಾತ್ರಷ್ಟು ಉಬ್ಬುತ್ತದೆ. ಎನ್ನುವ ಮಾತು ಸಟಿಯಲ್ಲ. ಇಂಗ್ಲೀಷ ದಳವಾಯಿಗಳಂತೂ ಅಲ್ಲಲ್ಲಿ ಕ್ರಾಂತಿಕಾರರನ್ನು ಬೆನ್ನಟ್ಟಿ ಹಣ್ಣುಮಾಡುವ ಉದ್ದೇಶದಿಂದಲೇ ದಂಡು ಕಟ್ಟಿಕೊಂಡು ತಿರುಗಾಡುತ್ತಲೇ ಇದ್ದರು. ಇಷ್ಟರಲ್ಲಿ ರುಯಿಯಾ ಕೋಟೆಯ ನರಪತಸಿಂಗ

ನೊಡನೆ ಹೋರಾಡುವ ಕಾಲಕ್ಕೆ ಗ್ರ್ಯಾಂಟ ಹೋಪ ಎಂಬ ವೀರ ಇಂಗ್ಲೀಷ ದಳವಾಯಿಯು ಮಡಿದನು. ಇದರಿಂದ ರೊಚ್ಚಿಗೆದ್ದು ಇಂಗ್ಲೀಷರು ರೋಹಿಲ ಖಂಡದ ಮೇಲೆಯೇ ದಾಳಿಯನ್ನು ಕೇಂದ್ರೀಕರಿಸಲು ಯೋಚನೆ ನಡಿಸಿದರು.

## ಕ್ರಾಂತಿಕಾರರ ಮುಂದಣ ಕಾರ್ಯ.

ಇತ್ತ, ಈ ಬಗೆಯ ಘಟನೆಗಳು ನಡೆದಿರುವ ಕಾಲಕ್ಕೆ ಶಹಾಜಹಾನ ಪುರದಲ್ಲಿ ಕ್ರಾಂತಿಕಾರರೆಲ್ಲರೂ ಕೂಡಿ, ಮುಂದಿನ ವಿಚಾರದಲ್ಲಿ ತೊಡಗಿದ್ದರು. ಇವರಲ್ಲಿ ನಾನಾಸಾಹೇಬ ಪೇಶವೆ ಮತ್ತು ಅಹಮ್ಮದಶಹ ಇವರಿದ್ದರು. ಇವರೀರ್ವರು ಇಂಗ್ಲೀಷ ದಳವಾಯಿಗಳು ಮಾಡುವ ಯೋಚನೆಗಳನ್ನೆಲ್ಲ ಹಾಳುಮಾಡಿ, ಮತ್ತೆ ಅಜೇಯರಾಗಿ ಅಲ್ಲಲ್ಲಿ ಅಡಗುತ್ತ ಅವರಿಗೆ ಎದೆಗೊಟ್ಟು ಕಾದಾಡುತ್ತಿದ್ದರು. ಶಹಾಜಹಾನ ಪುರದಲ್ಲಿ ಕ್ರಾಂತಿಕಾರಕರ ಮೇಳವು ಕೂಡಿರುವ ಸುದ್ದಿ ಕೇಳಿ, ಆ ಊರಿಗೆ ಕಾಲಿನ್ ಎಂಬ ದಳವಾಯಿಯು ಸುತ್ತು ಮುತ್ತಿಗೆ ಹಾಕಿದನು; ಆದರೆ, ಅವನು ಮೊತ್ತ ಮೊದಲೇ ಕ್ರಾಂತಿಕಾರಕರು ಅಲ್ಲಿಯ ಸರಕಾರಿ ಕಚೇರಿ-ಕಟ್ಟಿಗಳನ್ನು ಸುಟ್ಟು ಪಾರಾಗಿದ್ದರು. ಕಾಲಿನ್ನನಿಗೆ ನಿರಾಶೆ ಆಯಿತು. ಇದಾದ ತರುವಾಯು, ಬರೇಲಿಯ ಪಟ್ಟಣಕ್ಕೆ ಮುತ್ತಿಗೆ ಹಾಕುವ ಅಪೇಕ್ಷೆಯು ಕಾಲಿನ್ನನಿಗೆ ಉಂಟಾಯಿತು. ಅವನು ತನ್ನ ದಂಡಿನಲ್ಲಿಯೇ ಒಂದು ತುಂಡು ಸೈನ್ಯವನ್ನು ನಾಲ್ಕು ತೋಫುಗಳನ್ನು ಅಲ್ಲಿಯೇ ಇಟ್ಟು, ಬರೇಲಿಗೆ ಹೊರಟನು. ಅದನ್ನು ರೋಹಿಲೆಯಾರ ಖಾನ ಬಹಾದ್ದೂರ ಖಾನನು ಕಾಪಾಡುವದಲ್ಲದೆ, ಅದನ್ನು ಸ್ವತಂತ್ರಗೊಳಿಸಿದ್ದರಿಂದ, ದಿಲ್ಲಿ-ಲಖನೌಗಳಿಂದ ಎಲ್ಲ ಕ್ರಾಂತಿಕಾರರು ಬಂದು ಒಟ್ಟುಗೂಡುತ್ತಿದ್ದರು. ಅವರಲ್ಲಿ ದಿಲ್ಲಿಯ ಯುವರಾಜನಾದ, ಮಿರ್ಝಾ ಫಿರೋಜಶಹ, ಶ್ರೀಮಂತ ನಾನಾಸಾಹೇಬ, ಬೇಗಂ ಹಜರತ್ ಮಹಲ್, ತೇಜಸಿಂಗ ಇವರೆಲ್ಲರೂ ಇದ್ದರು. ಬರೇಲಿಯ ಕೋಟೆಯ ಮೇಲೆ ಸ್ವಾತಂತ್ರ್ಯ ಧ್ವಜವು ಹಾರಾಡುತ್ತಿತ್ತು. ಕಾಲಿನ್ನನು ಬರೇಲಿಗೆ ಬಂದ ಸಂಧಿ ಸಾಧಿಸಿ, ಅಹಮ್ಮದಶಹನು ಮತ್ತೊಂದು ದಂಡಿನೊಡನೆ ಶಹಾಜಹಾನ ಪುರವನ್ನು ಮುತ್ತಿದ ಕೂಡಲೇ ಅಲ್ಲಿದ್ದ ಇಂಗ್ಲೀಷ ದಂಡಿನವರು ಸುರಕ್ಷಿತವಿರುವ ಸ್ಥಳದಲ್ಲಿಗೆ ಹೋಗಿದ್ದು ಹೊರಗಿನಿಂದ ಸಹಾಯ ಬರುವ

ದಾರಿನೋಡುತ್ತ ಕುಳಿತರು. ಆದರೆ, ಅವರಿರುವ ಸ್ಥಳದ ಮೇಲೆಯೇ ಅಹಮ್ಮದಶಹನು ತೋಪು ಹಚ್ಚಿ ಹಾರಿಸಹತ್ತಿದನು ಅಹಮ್ಮದಶಹನು ನಡಿಸಿರುವ ಹಾಳಿಯ ವರ್ತಮಾನ ಕೇಳಿ ಕಾಲಿನ್ನನು 'ಇನ್ನು ಮಾತ್ರ ಅಹಮ್ಮದಶಹನು ನನ್ನ ಜಾಲದಲ್ಲಿ ಸಿಗುವದು ಖಂಡಿತ' ಎಂದು ಊಹಿಸಿ, ಸಂಪೂರ್ಣ ವಿಚಾರ ಮಾಡಿಕೊಂಡು, ಅಹಮ್ಮದಶಹನ ಮೇಲೆ ಏರಿ ಹೋಗಲು ನಡೆದನು. ಮೌಲವಿಯು ದಂಡಿನವರಿಗೂ, ಅವನಿಗೂ ಮೂರು ದಿನ ಘನ ಘೋರ ಸಂಗರ ನಡೆಯಿತು. ಹಿಂದೆ ಶತ್ರುಗಳು, ಮುಂದೆ ಶತ್ರುಗಳು ಈ ಪೇಚಿನಲ್ಲಿ ಅಹಮ್ಮದಶಹನುಸಿಕ್ಕನು ಮೌಲವಿ ಪಾರಾಗುವದು ಅವಶ್ಯಕವಾಯಿತು. ಅವನ ಜಯದಾಶೆ ಜಾರಿತು. ಅಷ್ಟರಲ್ಲಿ ಕ್ರಾಂತಿ ಕಾರಕ ಮುಖಂಡರಾದ ನಾನಾಸಾಹೇಬ, ಅಯೋಧ್ಯೆಯ ಬೇಗಂ, ಫಿರೋಜ ಶಹ ಇವರೆಲ್ಲರೂ ಬೆಂಗಾವಲಿಗೆ ಬಂದುದರಿಂದ ಅಹಮ್ಮದಶಹನು ಶತ್ರು ವಿನ ಮೂಗಿಗೆ ಇಂಗು ಹಚ್ಚಿ, ಅಯೋಧ್ಯೆಯ ಪ್ರಾಂತದಲ್ಲಿ ಹೊಕ್ಕನು. ಕಾಲಿನ್ನನು ಅವನನ್ನು ಬೆಂಬತ್ತಿ ಅಯೋಧ್ಯೆಯ ಪ್ರಾಂತಕ್ಕೇ ನುಸುಳಿದನು. ಆಗ ಅವನು ರೋಹಿಲಖಂಡಕ್ಕೆ ತೆರಳಿದನು; ಅಲ್ಲಿಯೂ ಅವನು ದಂಡೆತ್ತಿ ಬಂದುದರಿಂದ ಮರಳಿ ಅಯೋಧ್ಯೆಗೆ ತಲ್ಪಿದನು. ಈ ತೆರನಾಗಿ, ತನ್ನ ಮೈಯ್ಯಲ್ಲಿ ಹುರುಡು ಇರುವವರೆಗೆ, ಆ ಬಂಟನು ಮಿಂಚಿನಂತೆ ಅಖಂಡ ವಾಗಿ ಹೋರಾಡಿದನು. ಅಹಮ್ಮದಶಹನು ನಡಿಸಿದ ಬಂಟತನ ಹೋರಾಟ ವನ್ನು ಪ್ರತ್ಯಕ್ಷ ಕಂಡವರು ಬೆರಳು ಕಚ್ಚಿದರು. ಅವನ ಮೈಯಲ್ಲಾಗ ವೀರಶ್ರೀಯ ಕುದಿಯು ಉಕ್ಕುತ್ತಿದ್ದಿತು.

## ಮೌಲವಿಯ ಹುಮ್ಮಸ್ಸು ಹೆಚ್ಚಿತು

ಅಯೋಧ್ಯೆಯ ಪ್ರಾಂತವನ್ನು ಸೇರಿದಮೇಲೆ, ಇನ್ನಷ್ಟು ಕಡುಕಲಿ ತನದಿಂದ ಇಂಗ್ಲೀಷರೊಡನೆ ಕಾದಾಟ ನಡೆಯಿಸಬೇಕೆಂದು ಮೌಲವಿಯಲ್ಲಿ ಹುಮ್ಮಸ್ಸು ಹೆಚ್ಚಿತು ಮತ್ತು ಇದೇ ಉದ್ದೇಶದಿಂದ ಅವನು ಅಯೋಧ್ಯೆಯ ಪ್ರಾಂತದಲ್ಲಿ ಬ್ರಿಟಿಶರ ವಿರುದ್ಧ ಪ್ರಚಂಡವಾದ ಚಳವಳಿಯನ್ನೇ ಎಬ್ಬಿಸುವ ಸಂಚು ಮಾಡಿದನು ಆ ಸಮಯಕ್ಕೆ ಆ ಪ್ರಾಂತದಲ್ಲಿರುವ ಪೊವೆನ್ನದ ಅರ ಸನ ಸಹಾಯವನ್ನು ಕೋರಿದನು. ಅಷ್ಟಕ್ಕೆ ನಿಲ್ಲದೆ, ಅವನು ಅಯೋ

ಧೈಯ ಬೇಗಮಳ ರಾಜಮುದ್ರಿಕೆಯನ್ನೊತ್ತಿ ಒಂದು ಬಿನ್ನವತ್ತಳಿಯನ್ನು ಅವನಿಗೆ ಕಳುಹಿದನು. ಮೌಲವಿಯು ವಿಚಾರವನ್ನೋದಿ ಅವನ ಎದೆ ಯೊಡೆಯಿತು. ಅಂಜುಕುಳಿಗಳು ಯಾವಾಗಲೂ ಮೋಸಗಾರರು ಇಲ್ಲವೆ ಕುತ್ತಿಗ್ಗೊಯ್ಕರಿರುತ್ತಾರೆ. ಒಳ್ಳೆಯ ವಿಚಾರಗಳಂತೂ ಅವರಲ್ಲಿ ಇರುವ ದಿಲ್ಲ. ಅಂದಮೇಲೆ ತಮ್ಮಲ್ಲಿಯ ಕೆಟ್ಟ ವಿಚಾರಗಳನ್ನು ಪ್ರಕಟವಾಗಿ ತೋರ್ಪ ಡಿಸುವ ಧೈರ್ಯವೆಲ್ಲಿಂದ ಬರಬೇಕು? ಆದುದರಿಂದ, ಅವನು ಮೌಲ ವಿಯ ಪತ್ರಕ್ಕೆ ಉತ್ತರ ಬರೆದು ದಯವಿಟ್ಟು ತಾವೇ ಬಂದು ಕಂಡು ಮಾತಾಡಬೇಕು ಎಂದು ತಿಳಿಸಿದನು. ಪೊವೆನ್ನ ಅರಸನನ್ನು ನಂಬಿ, ಅವ ನನ್ನು ಕಾಣಲಿಕ್ಕೆಂದು ಆನೆಯ ಮೇಲೆ ಕುಳಿತು ತಾನೇ ಹೊರಟನು. ಆದರೆ, ಪೊವೆನ್ನಕ್ಕೆ ಹೋಗಿ ನೋಡುತ್ತಾನೆ! ಅಗಸೆಯ ಬಾಗಿಲುಗಳನ್ನು ಇಕ್ಕಿ, ಸಶಸ್ತ್ರಸಿಪಾಯರು ಕೋಟೆ-ಕೊತ್ತಲುಗಳನ್ನು ಕಾಯುತ್ತಿದ್ದರು. ಅವರ ಮಧ್ಯದಲ್ಲಿ ಅರಸನಾದ ಜಗನ್ನಾಥಸಿಂಗನು ತನ್ನ ತಮ್ಮನೊಡನೆ ನಿಂತಿದ್ದನು. ಈ ವಿಲಕ್ಷಣ ನೋಟವು ಮೌಲವಿಯ ಮನಸ್ಸಿನಲ್ಲಿ ಏನೋ ಒಂದುಬಗೆಯ ಅಪನಂಬಿಕೆಯನ್ನು ಹುಟ್ಟಿಸಿದರೂ, ಎದೆಗುಂದದೆ ಅವನು ನಿಂತಲ್ಲಿಂದಲೇ ಅರಸನ ಸಂಗಡ ಮಾತಾಡತೊಡಗಿದನು. ಆ ರಣಹೇಡಿಗೆ ಅಹಮ್ಮದಶಹನ ಮಾತಿನ ಮಹತ್ವವು ತಿಳಿಯುವದೆಂತು? ಮೌಲವಿಯನ್ನು ಒಳಗೆ ಬರಗೊಟ್ಟರೆ, ಏನು ಅನಾಹುತ ಸಂಭವಿಸುವದೋ ಎಂದು ಅವನಿಗೆ ಅನುಮಾನ!

## ಮೌಲವಿಯ ಮರಣ

ಪೊವೆನ್ನದ ರಾಜನು ಅಗಸೆಯ ಬಾಗಿಲು ತೆರೆಯುವದಿಲ್ಲವೆಂದು ಸ್ಪಷ್ಟ ವಾದಮೇಲೆ, ಮೌಲವಿಯು ಆನೆಯ ಸೊಂಡಿಯಿಂದ ಅಗಸೆಯ ಬಾಗಿಲನ್ನು ಮುರಿಸಲು ಮಾವುತನಿಗೆ ಹೇಳಿದನು. ಮಾವುತನು ತನ್ನ ಕೈಲಾದ ಯತ್ನ ನಡಿಸಿದನು. ಇನ್ನೊಂದೆರಡುಸಾರೆ ಆನೆಯು ಹೊಡೆತ ಹಾಕಿದ್ದರೆ, ಅಗ ಸೆಯು ಮುರಿದು ಬೀಳುತ್ತಿತ್ತು. ಅಷ್ಟರೊಳಗೆ, ಕೋಟೆಯಮೇಲೆ ಹತ್ತಿರವೇ ನಿಂತಿದ್ದ ಜಗನ್ನಾಥಸಿಂಗನ ತಮ್ಮನು ನೇರವಾಗಿ ಗುರಿಯಿಟ್ಟು, ಗುಂಡು ಹಾರಿಸಿದನು. ಅದು ಅಹಮ್ಮದಶಹನ ಕೈಗೆ ತಾಕಿ, ಅವನು ನೆಲಕ್ಕುರಳಿ

ದನು. ಆಮೇಲೆ ಕೋಟೆಯಿಂದಿಳಿದು ಬಂದು, ಅವರು ಮೌಲವಿಯ ರುಂಡವನ್ನು ಧಡದಿಂದ ಬೇರೆಮಾಡಿ, ಅದನ್ನೊಂದು ಬಟ್ಟೆಯಲ್ಲಿ ಮುಚ್ಚಿ, ಶಹಾಜಹಾನ ಪುರದಲ್ಲಿ ಬೀಡು ಬಿಟ್ಟಿರುವ ಬ್ರಿಟಿಶರ ಠಾಣ್ಯಕ್ಕೆ ಒಯ್ದನು. ಆದಾಗ, ದಂಡಿನ ಅಧಿಕಾರಿಗಳೆಲ್ಲರೂ ಊಟಕ್ಕೆ ಕುಳಿತಿದ್ದರು. ಆ ಹೇಡಿ ಮತ್ತು ವಿಶ್ವಾಸಘಾತಕ ಅರಸನು ತಾನು ತಂದಿರುವ ಹೆಣದ ಮೇಲಿನ ಬಟ್ಟೆಯನ್ನು ತೆಗೆದು, ಆ ಅಧಿಕಾರಿಗಳ ಕಾಲ್ಕೆಳಗೆ ಮೌಲವಿಯ ರುಂಡ ವನ್ನುರುಳಿಸಿದನು. ಆಗ ಕೂಡ ರುಂಡದಿಂದ ನೆತ್ತರವು ತೊಟ್ಟಿಕ್ಕುತ್ತಿದ್ದಿತು. ಮೌಲವಿಯ ತಲೆಯನ್ನವರು ಮರುದಿನ ಕೊತವಾಲನ ಚಾವಡಿಗೆ ಕಟ್ಟಿ ಸಿದರು. ಅರಸನಿಗೆ ೫೦ ಸಾವಿರ ರೂಪಾಯಿಗಳ ಬಹುಮಾನ ಕೊಟ್ಟರು. ಈ ಸುದ್ದಿಯು ವಿಲಾಯತಿಗೆ ಮುಟ್ಟಿದಾಗ "ಉತ್ತರ ಹಿಂದುಸ್ಥಾನದಲ್ಲಿಯ ಬ್ರಿಟಿಶರ ಭಯಂಕರ ಶತ್ರು ಒಬ್ಬ ಸತ್ತನು" ಎಂದು ಸಮಾಧಾನದ ನಿಟ್ಟು ಸಿರು ಬಿಟ್ಟರಂತೆ !

## ಅಹಮ್ಮದಶಹನ ಬಗೆಗೆ ಬ್ರಿಟಿಶ ಇತಿಹಾಸಕಾರರ ಅಭಿಪ್ರಾಯ—

ಮ್ಯಾಲಸನ್ ಎಂಬ ಇತಿಹಾಸಗಾರನು 'ಭಾರತೀಯರ ಬಂಡಾಯ' ಎಂಬ ಪುಸ್ತಕದಲ್ಲಿ ಅನ್ನುವದು— ಮೌಲವಿ ಅಹಮ್ಮದಶಹನೆಂದರೆ, ಅವ ನೊಬ್ಬ ಅಸಮಾನ್ಯ ವ್ಯಕ್ತಿ. ಅವನು ಕಾಲಿನ್ ಕ್ಯಾಂಬೆಲ್ಲನಿಗೆ ಎರಡು ಸಾರೆ ಚನ್ನಾಗಿಯೇ ಗೋಳಾಡಿಸಿದನು. ಇಷ್ಟರವುಟ್ಟಿಗೆ ಅವನನ್ನಾರೂ ಗೋಳಾಡಿ ಸಿರಲಿಲ್ಲ. ಪರರು ಅನ್ಯಾಯದಿಂದ ತನ್ನ ದೇಶದ ಸ್ವಾತಂತ್ರ್ಯವನ್ನು ಅಪ ಹರಿಸಿದ್ದನ್ನು ನಾನಾ ತರದ ಹಂಚಿಕೆಗಳಿಂದ ಮರಳಿ ಗಳಿಸಲು ಕಷ್ಟಪಟ್ಟ ದೇಶಾಭಿಮಾನಿಗಳಲ್ಲಿ ಅವನೊಬ್ಬ ಶ್ರೇಷ್ಠ ದೇಶ ಭಕ್ತನೆಂದು ಹೇಳಬಹುದು ನಿರಪರಾಧಿಗಳನ್ನು ಕೊಂದು, ಅವನು ತನ್ನ ಕುತ್ತಿಗೆಯನ್ನು ಎಂದೂ ಅಪವಿತ್ರಗೊಳಿಸಲಿಲ್ಲ. ತನ್ನ ತಾಯ್ನಾಡಿನ ಸ್ವಾತಂತ್ರ್ಯಕ್ಕಾಗಿ, ಅತ್ಯಂತ ನಿಚ್ಚಟದಿಂದ, ಮಹಾವೀರನಂತೆ ಹೋರಾಡಿದನು; ಆದುದರಿಂದ, ಎಲ್ಲ ಜನಾಂಗಗಳಲ್ಲಿಯ ಧೀರ–ವೀರರ ಮನ್ನಣೆಗೆ ಅವನು ತುಂಬ ಪಾತ್ರನು.



## ನರಸಿಂಹನಾದ

# ೪. ಜಗದೀಶಪುರದ ವೀರ ಕುವರಸಿಂಹ

### ಬಿಹಾರ ಪ್ರಾಂತದ ಸ್ಥಿತಿ

ಕ್ರಾಂತಿಯ ದಾವಾನಲವು ಉತ್ತರಹಿಂದುಸ್ತಾನದಲ್ಲೆಲ್ಲ ಹರಡಿ, ಉರಿಯುತ್ತಿರುವಾಗ ಆಗ್ರಾ, ಆರಾ, ಶಹಾಬಾದ, ಮುಜಫರಪುರ ಮುಂತಾದ ಜಿಲ್ಲೆಗಳಲ್ಲಿಯೂ ಅದು ಹೊಗೆಯುತ್ತಿದ್ದಿತು. ಆಗ ಪಾಟಣಾದ ಹತ್ತಿರ ದಾನಾಪುರ ಎಂಬಲ್ಲಿ ಬ್ರಿಟಿಶರ ಸೈನ್ಯದ ನಿಲ್ದಾಣವಿತ್ತು. ಮೇಜರ ಜನರಲ್ ಲಾಯಿಡ್ ಎಂಬುವನು ಅದರ ಸೇನಾನಾಯಕನು. ಬ್ರಿಟಿಶರ ವಿರುದ್ಧ ಆಗೊಂದು ಬಿರುಗಾಳಿಯೇ ಎದ್ದಿತ್ತು ಎಂದರೆ ತಪ್ಪಾಗದು. ದೇಶದ ಎಲ್ಲ ಭಾಗಗಳಲ್ಲಿಯ ಶಿರಿವಂತರು, ಜಮೀನದಾರರು, ವಿವಿಧ ಉದ್ಯೋಗ-ಉದ್ದಿಮೆ

ದಾರರಲ್ಲಿ ಬ್ರಿಟಿಶರ ಬಗ್ಗೆ ತೀವ್ರ ದ್ವೇಷ ವುಂಟಾಗಿ, ಅವರ ಆಳಿಕೆ ಯನ್ನೇ ಬುಡಮೇಲು ಮಾಡಲು ಗುಪ್ತ ಸಂಘಗಳನ್ನು ಮಾಡಿಕೊಂಡು ರಾತ್ರಿ-ಹಗಲೆನ್ನದೆ ಕಾರ್ಯ ನಡಿಸಿದ್ದರು. ಆ ಕಾಲಕ್ಕೆ ಬಿಹಾರ ಪ್ರಾಂತಕ್ಕೆ ಪಾಟಣ ಪಟ್ಟಣವೇ ಕ್ರಾಂತಿಕಾರಕರಿಗೆ ಕೇಂದ್ರವಾಗಿತ್ತು. ಗುಪ್ತ ಸಂಘ ಗಳಲ್ಲಿಯ ಜನರು ದೇಶದಲ್ಲಿ ಶಾಂತಿ-ಸಮಾಧಾನಗಳನ್ನು ಕಾಯುವ ಪೋಲೀ ಸರೇ ಇದ್ದುದರಿಂದ ಯಾವಬಗೆಯ ತೊಂದರೆಗೆ ಆಸ್ಪದವಿರಲಿಲ್ಲ. ತಮ್ಮ ಗುಟ್ಟಿನ ಸುದ್ದಿಯು ಯಾವನಿಂದಾದರೂ ಬೈಲಿಗೆ ಬಂದರೆ, ಅವನನ್ನು ಆ ಕ್ಷಣದಲ್ಲಿಯೇ ಕೊಂದುಬಿಡುತ್ತಿದ್ದರು.

## ಪೋಲಿಸರ ಬಗ್ಗೆ ಸಂಶಯ.

ಆ ಸಮಯಕ್ಕೆ, ಬಿಹಾರದಲ್ಲಿ ಟೇಲರ ಎಂಬವನು ಕಮಿಶನರನಿದ್ದನು. ಜನರ ಮನದಾಳವನ್ನು ಹೊಕ್ಕು ನೋಡುವಷ್ಟು ಅವನು ಧೂರ್ತನು; ಅದರಿಂದ ಮೀರತ ಮುಂತಾದವುಗಳಲ್ಲಿಯಂತೆ, ಕಾನಪುರದಲ್ಲಿಯ ಸೀಪಾಯಿ ಗಳಲ್ಲಿಯೂ ಅಸಂತೋಷವಿರುವದು ಅವನಿಗೆ ಕಂಡು ಬಂದಿತ್ತು, ಅದು ಅವನಿಗೆ ಒಂದು ಸಂಧಿಯಲ್ಲಿ ಅನುಭವಕ್ಕೂ ಬಂದಿತು. ಹೇಗೆಂದರೆ, ಇಂಗ್ಲೀಷ ದಂಡಿನಲ್ಲಿ ಕೆಲಸ ಮಾಡುತ್ತಿದ್ದ ಪೋಲೀಸ ಜಮಾದಾರನೊಬ್ಬನು ಒಮ್ಮೆ ಗಯಾದಲ್ಲಿರುವ ಅಲೀಕರೀಮ ಎಂಬ ಕ್ರಾಂತಿಕಾರಕ ಮುಂದಾಳು ವಿಗೆ ಕಾಗದ ಬರೆಯುತ್ತಿದ್ದನು. ಅದನ್ನು ನೋಡಿ, ಆ ಸಾಹೇಬನು ಅವ ನನ್ನು ಗಲ್ಲಿಗೇರಿಸಿದನು. ಆ ಕಾಲಕ್ಕೆ ಆ ಜಮಾದಾರನು "ನಿಜವಾದ ಸ್ವರಾಜ್ಯದ ಭಕ್ತನು ಯಾವನಾದರೂ ಇದ್ದರೆ, ಅವನೀಗ ಮುಂದೆ ಬಂದು ನನ್ನನ್ನು ಉಳಿಸಲಿ" ಎಂದು ಕೂಗಿದನಂತೆ, ಮುಂದೆ ಆ ಸಾಹೇಬನು ಅಲೀಕರೀಮನನ್ನು ಸೆರೆ ಹಿಡಿಯಲು ಯುರೋಪಿಯ ದಂಡಿನವರನ್ನು ಕಳಿಸಿದರು ಅದು ಫಲಕಾರಿಯಾಗಲಿಲ್ಲ ಆಗ ಟೇಲರನು ಪಾಟನಾದಲ್ಲಿರುವ ಕೆಲವು ಮುಖಂಡರಾದ ನಾಗರಿಕರದೊಂದು ತನ್ನ ಮನೆಯಲ್ಲಿ ಸಭೆಕೂಡಿ ಸಿದನು. ಸಭೆಗೆ ಬಂದಿರುವ ಜನರಲ್ಲಿ ಕೆಲವರನ್ನು ಅಲ್ಲಿಯೇ ಸೆರೆಹಿಡಿದನು. ಅವರಲ್ಲಿ ಕೆಲವರು ಕ್ರಾಂತಿಯ ಮುಖಂಡರು ಇದ್ದುದೇನೂ ಸುಳ್ಳಲ್ಲ.

ಈ ಸುದ್ದಿಯು ಊರಲ್ಲಿ ಹಬ್ಬಿತು, ಆಗ ಮುಸಲ್ಮಾನರೆಲ್ಲರೂ ಪೀರ ಅಲ್ಲೀ ಎಂಬ ನಾಯಕನ ಮನೆಯಲ್ಲಿ ಒಟ್ಟು ಗೂಡಿ, ಇಂಗ್ಲೀಷರ ಮೇಲೆ ಹಲ್ಲೆ ನಡಿಸುವ ಯೋಚನೆ ಮಾಡಿ, ಕ್ರಿಸ್ತರ ಚರ್ಚಿನ ಕಡೆಗೆ ಗುಂಪು ಕಟ್ಟಿ ಕೊಂಡು ಸಾಗಿದರು ದಾರಿಯಲ್ಲಿ ಅವರ ಕೈಗೆ ಲಿಯಾಲ್ ಎಂಬ ಇಂಗ್ಲೀ ಶರವನು ಸಿಕ್ಕನು. ಅವನನ್ನು ಅವರು ಕೊಂದುದರಿಂದ ಟೇಲರನು ಅವರ ನ್ನೆಲ್ಲ ಸೆರೆ ಹಿಡಿದನು. ಅವರಲ್ಲಿ ಪೀರಅಲ್ಲಿ ಎಂಬವನು ಇದ್ದನು.

## ಪೀರ ಅಲ್ಲಿಯ ಮರಣ.

ಪೀರ ಅಲ್ಲಿಯು ಒಬ್ಬ ಪುಸ್ತಕ ಮಾರುವವ. ಅವನದೊಂದು ಅಂಗಡಿಯು ಪಾಟಣದಲ್ಲಿತ್ತು. ತನ್ನ ಅಂಗಡಿಯಲ್ಲಿಯ ಪುಸ್ತಕಗಳನ್ನೋದಿ ಕೊಂಡು, ಅವನು ಸ್ವಾತಂತ್ರ್ಯದ ಮಹತ್ವವನ್ನು ಚನ್ನಾಗಿ ತಿಳಿದುಕೊಂಡಿ ದ್ದನು. ಮತ್ತು ದಿಲ್ಲಿ ಲಖನೌ ಕ್ರಾಂತಿಕಾರರೊಡನೆ ಪತ್ರವ್ಯವಹಾರ ನಡಿಸಿ. ಕ್ರಾಂತಿಕಾರಕರಿಗೆಲ್ಲ ಮುಂದಾಳಾದನು ಸ್ವಭಾವದಿಂದ ಅವನು ಬಹು ವೀರವೃತ್ತಿಯವನು. ತನ್ನ ದೇಶ ಬಂಧುಗಳು ಪಡುವ ಕಷ್ಟವನ್ನು ಕಣ್ಣಿ ನಿಂದ ನೋಡಲಿಕ್ಕಾಗದಷ್ಟು ತೀವ್ರ ಭಾವನೆಯವನವನು. ತನ್ನ ಮನದಲ್ಲಿಯ ತೀವ್ರ ಭಾವನೆಗಳನ್ನು ತಡೆಯಲಿಕ್ಕಾಗದೆ, ಅವನು ಆ ಕಾಲಕ್ಕೆ ಗೊಂದಲ ನಡಿಸಿದ್ದರಿಂದ ಅವನನ್ನು ಗಲ್ಲಿಗೇರಿಸಿದರು. ಸಾಯುವ ಕಾಲಕ್ಕೆ ಇಂಗ್ಲೀಷ ಅಧಿಕಾರಿಗಳು ಅವನನ್ನು ಕುರಿತು "ಈಗಲಾದರೂ ನೀನು ಕ್ರಾಂತಿಕಾರರ ಹೆಸರುಗಳನ್ನು ಹೇಳಿದರೆ, ನಿನ್ನನ್ನು ಬಿಡುವೆವು" ಎಂದಾಗ, ಅವನು "ಮನುಷ್ಯನು ತನ್ನ ಜೀವಕ್ಕೆ ಮಹತ್ವ ಕೊಡುವ ಕೆಲವು ಪ್ರಸಂಗಗಳಿವೆ; ಆದರೆ, ಈಗ ಮಾತ್ರ ಸಾವಿಗೆನೇ ಮಹತ್ವ. ನೀವು ನನ್ನನ್ನು ಕೊಲ್ಲಬಹುದು; ಆದರೆ, ನನ್ನ ಧ್ಯೇಯ ವಿಚಾರಗಳನ್ನು ಕೊಲ್ಲಲಾರಿರಿ. ನಾನೊಬ್ಬ ಸತ್ತರೆ, ನನ್ನ ರಕ್ತದ ಹನಿ–ಹನಿಗಳಿಂದ ಸಾವಿರಾರು ವೀರರು ಹುಟ್ಟಿ, ನಿಮ್ಮ ರಾಜ್ಯ ವನ್ನು ನಾಶಪಡಿಸುವರು" ಹೀಗೆಂದು ತನ್ನ ಪ್ರೀತಿಯ ಮಗನನ್ನು ನೆನೆದು ಪ್ರಾಣಬಿಟ್ಟನು. ಆವೇಶದಿಂದ ತುಂಬಿದ ಸೀಪಾಯರ ಕಿವಿಗಳಲ್ಲಿ ಪೀರ ಅಲ್ಲಿಯ ಮಾತುಗಳು ಝುಂಕರಿಸಹತ್ತಿದವು. ಪೀರಅಲ್ಲಿಯನ್ನು ಗಲ್ಲಿಗೇರಿಸಿದ

ಸುದ್ದಿಯನ್ನು ಕೇಳಿ, ದಾನಾಪುರದಲ್ಲಿಯ ದಂಡಿನವರು ರೇಗಿ ಕಿತ್ತುಕೊಂಡೆದ್ದು ಇಂಗ್ಲೀಷ ಅಧಿಕಾರಿಗಳನ್ನು ಲೆಕ್ಕಿಸದೆ, ಅವರ ಮುಂದೆಯೇ ತಮ್ಮ ಮೈ-ಮೇಲಿನ ದಂಡಿನ ಅಂಗಿ-ಚಣ್ಣ ಮೊದಲಾದ ಉಡುಪುಗಳನ್ನು ಹರಿದು ಹಾಕಿ, ಆವೇಶಯುತರಾಗಿ, ಶೋಣ ನದಿಯ ಕಡೆಗೆ ರಣ ಕಾಳಿಯನ್ನು ಊದುತ್ತ ಸಾಗಿದರು.

## ಶೋಣನದಿಯಾಚೆಯಲ್ಲಿದ್ದ ಜಗದೀಶಪುರ

ಶೋಣನದಿಯ ಆಚೆಯಲ್ಲಿ ಜಗದೀಶಪುರವಿತ್ತು. ಅಲ್ಲಿಯ ರಜಪುತ ವೀರನಾದ ಕುವರಸಿಂಹನಿಂದ ತಮಗೆ ಬೆಂಬಲ ಸಿಗುವದಲ್ಲದೆ, ತಮ್ಮ ಮುಖಂಡನೂ ಆಗಬಹುದೆಂಬ ಭರವಸೆ ಅವರಿಗಿತ್ತು. ಸೀಪಾಯರ ಈ ಸ್ವಾತಂತ್ರ್ಯದ ಸಮರದಲ್ಲಿ ನಿಜವಾದ ಮುಂದಾಳು ದೊರೆಯುವದೊಂದು ಆಗ ದೊಡ್ಡ ಕೊರತೆಯೇ ಇದ್ದಿತು. ಕುವರ ಸಿಂಹನು ಜಗದೀಶಪುರದ ಜಹಗೀರದಾರ. ಇವರು ಒಟ್ಟಿಗೆ ಮೂರುಮಂದಿ ಅಣ್ಣತಮ್ಮಂದಿರು. ಅವರಲ್ಲಿ ಕುವರನೇ ಹಿರಿಯ. ತನ್ನ ಪಾಲಿಗೆ ಬಂದಿರುವ ಭೂಮಿ, ಆಸ್ತಿ ಮುಂತಾದವನ್ನೆಲ್ಲ ಇವನು ಕಾಯ್ದುಕೊಂಡಿದ್ದನು. ಆದರೆ, ಇವನ ತಮ್ಮಂದಿರು ಕಳೆದುಕೊಂಡು ಸಾಲಗಾರರಾಗಿದ್ದರು. ಸಾಲಕೊಟ್ಟವರು ತಮ್ಮಂದಿರ ಮೇಲೆ ವ್ಯಾಜ್ಯ ನಡಿಸಿದರು. ಮನೆತನದ ಮರ್ಯಾದೆಗಾಗಿ ಸಾಲದ ಭಾರವನ್ನೆಲ್ಲ ಹಿರಿಯನಾದ ಕುವರಸಿಂಹನೇ ಹೊತ್ತನು. ಆದರೆ, ಅಷ್ಟರಲ್ಲಿ ಸರಕಾರದವರು ಇದರಲ್ಲಿ ಕೈ ಹಾಕಿ "ಎರಡು ತಿಂಗಳಲ್ಲಿ ಸಾಲ ತೀರಿಸದಿದ್ದರೆ ಜಹಗೀರಿಯನ್ನೇ ನಮ್ಮ ವಶಕ್ಕೆ ತೆಗೆದುಕೊಳ್ಳುವೆವು" ಎಂದು ಬೆದರಿಸಿದರು. ಕುವರಸಿಂಹನು ಅಭಿಜಾತ ರಜಪುತ ವೀರನು. ಪ್ರತ್ಯಕ್ಷ ವೀರ್ಯವೇ ಮೈದಳೆದು ನಿಂತ ಮೂರ್ತಿ. ಇದುವರೆಗೆ, ಅಂದರೆ ಅವನ ಜೀವಮಾನದ ೭೫-೮೦ ವರ್ಷಗಳಲ್ಲಿ ಇಂಥ ಅವಮಾನದ ಮಾತುಗಳನ್ನೆಂದೂ ಕಿವಿಯಿಂದ ಕೇಳುವ ಪ್ರಸಂಗ ಅವನಿಗೆ ಬಂದಿರಲಿಲ್ಲ. ಶಹಬಾದ ಜಿಲ್ಲೆಯಲ್ಲಿರುವ ತನ್ನ ಜಹಗೀರಿಯ ರೈತರಿಗೆಲ್ಲ ಕುವರಸಿಂಹನು ತಂದೆಯಂತಿದ್ದನು. ಅವನ ಮನಸ್ಸಿನ ದೊಡ್ಡಸ್ತಿಕೆ, ದಯಾ-ದಾಕ್ಷಿಣ್ಯಗಳ ಪುಣ್ಯವನ್ನು ಯಥೇ

ಷ್ಟವಾಗಿ ಉಂಡಂಥ ಅವನ ಪ್ರಜೆಗಳು ಅನೇಕರಿದ್ದರು. ಇಷ್ಟು ಜನಪ್ರಿಯ ನಾಯಕನ ಮೇಲೆ ಕೈ ಎತ್ತುವ ಎದೆಯನ್ನು ಇಂಗ್ಲೀಷರು ಮಾಡಿದ್ದಕ್ಕಾಗಿ ಶಹಾಬಾದ ಜಿಲ್ಹೆಯಲ್ಲಿ ಆಸಂತೋಷದ ಗಾಳಿ ಬೀಸುತ್ತಿದ್ದಿತು. ಬುನಾದಿ ಯಿಂದ ಬಂದ ತನ್ನ ಜಹಗೀರಿಯ ಮೇಲೆ ಇಂಗ್ಲೀಷರು ಕೊಡ್ಲೆ ಎತ್ತಿದ್ದ ಕ್ಕಾಗಿ ಏನು ಮಾಡಬೇಕೆಂಬ ತೀವ್ರ ಚಿಂತೆಯಲ್ಲಿಯೇ ಕುವರಸಿಂಹನು ಪೇಚಾಡುತ್ತಿದ್ದನು. ಇದಕ್ಕೂ ಮುಂದೆ ಹೋಗಿ, ಅದಾಗಲೇ ಅವನು ಇಂಗ್ಲೀಷರ ಆಳಿಕೆಯನ್ನು ಬುಡದಿಂದ ಕಿತ್ತಿಹಾಕಲು ನಾನಾಸಾಹೇಬನ ಸಂಗಡ ಪತ್ರವ್ಯವಹಾರ ನಡೆಸಿದ್ದನು. ಈ ಸಂಶಯದಿಂದ ಬ್ರಿಟಿಶರು ಕೂಡ ಅವನಮೇಲೆ ಕಾವಲಿಟ್ಟಿದ್ದರು. ಈ ಹೊತ್ತಿಗೆ ದಾನಾಪುರದಿಂದ ಸೀಪಾ ಯರ ಹಿಂಡು ಜಗದೀಶಪುರಕ್ಕೆ ಬಂದಿತು. ಇದುವರೆಗೆ ಒಳ್ಳೇ ಪ್ರಯತ್ನ ದಿಂದ ಹಿಡಿದ ಅವನ ಮನದ ತೂಕ ತಪ್ಪಿತು.

ಆ ಸಮಯದಲ್ಲಿ ಎಂಬತ್ತು ವರ್ಷದ ವೀರ ಕುವರಸಿಂಹನು ತನ್ನ ಅರ ಮನೆಯ ಅಂತಸ್ತಿನಲ್ಲಿ ನಿಂತುಕೊಂಡು ವೀರನಿಗುಚಿತವಾಗಿ ಮೀಸೆಗೆ ಹುರಿ ಹಾಕುತ್ತಿದ್ದನು. ಅವನ ದಿನಗಳೆಧ ಸಿಂಹದಂಥ ದೊಡ್ಡ ದೇಹ, ಅದಕ್ಕೆ ಒಪ್ಪುವಂಥ ಗಂಭೀರವಾದ ಮುಖ; ಶತ್ರುಗಳನ್ನು ದುರುದುರು ನೋಡಿ ಕಿಡಿಗಳನ್ನು ಕಾರುವ ಆ ಬಿರುಗಣ್ಣುಗಳ ನೋಟ; ವಿಶಾಲವಾದ ಎದೆ ಯವರೆಗೆ ಇಳಿಬಿದ್ದ ಆ ಬಿಳಿಯ ಗಡ್ಡದ ರಾಸಿ, ಇವೆಲ್ಲವುಗಳನ್ನು ನೋಡಿ ದವರಿಗೆ, ಮಾನವ ಸಿಂಹವನ್ನೇ ನೋಡಿದಂತೆನಿಸುತ್ತಿತ್ತು. ತನ್ನ ಮನೆತನ ವನ್ನೇ ಹಾಳುಮಾಡಲಿಕ್ಕೆ ಅಣಿಯಾಗಿರುವ ಇಂಗ್ಲೀಷರ ರಾಜ್ಯವನ್ನು ಹೇಗೆ ಬೇರು ಸಹಿತ ಕಿತ್ತಿ ಹಾಕಬಹುದೆಂಬ ವಿಚಾರದಲ್ಲಿ ತೂಗಾಡುತ್ತಿದ್ದನು. ಅತ್ತ ಕಡೆಯಿಂದ ನೂರಾರು ಜನರು ಹಿಂಡುಗಟ್ಟಿಕೊಂಡು ಬಂದರು. ಇವರೇ ದಾನಾಪುರದ ಸೀಪಾಯರು. ಅವರಲ್ಲಿ ಮುಂದಾಳುವಾದ ಒಬ್ಬನು ಮುಂದೆ ಬಂದು "ಮಹಾಸ್ವಾಮಿ, ಇನ್ನು ಅನುಮಾನವೇಕೆ? ಧರ್ಮ ಮತ್ತು ದೇಶಕ್ಕಾಗಿ ನಾವು ಇದೀಗ ನಮ್ಮ ಮನೆ-ಮಾರು, ಹೆಂಡಿರು-ಮಕ್ಕಳ ಹಂಗು ತೊರೆದು ಬಂದಿರುವೆವು! ನೀವು ನಮ್ಮ ನಾಯಕರು. ರಜಪುತ ಕುಲ ಶಿರೋಮಣಿಗಳು. ಈ ಧರ್ಮ ಸಂಗ್ರಾಮದೊಳಗೆ, ನೀವು ಮೊದಲು ಧುಮು ಕುವ ಹೊತ್ತು ಇದೀಗ ತಾನೇ ಸಂಧಿಸಿರುವದು." ಎಂದು ಮುಂತಾಗಿ,

ಅವರು ರೋಮಾಂಚದ ಹಿಂಡನೇಳಿಸುವ ರೀತಿಯಲ್ಲಿ ನುಡಿದರು. ವೃದ್ಧ ಕುವರ ಸಿಂಹನ ಮೈಯಲ್ಲಿ ಹುದುಗಿರುವ ಕ್ಷಾತ್ರ ತೇಜವು ಚೇತರಿಸಿಕೊಂಡು ಎದ್ದಿತು. ಒಂದು ಕ್ಷಣ ಸಹ ತಡೆಯದೆ, ಅವನು ಸೀಪಾಯಿಗಳ ಮುಂದಾಳಾಗಿ ಧ್ವಜವನ್ನೆತ್ತಿದನು. ಮತ್ತು ಇಂಗ್ಲೀಷರ ಸಂಗಡ ಕೂಟ ಯುದ್ಧ ನಡೆಯಿಸುವ ಪಂಥ ತೊಟ್ಟನು.

## ಆರಾದಲ್ಲಿಯ ಠಾಣ್ಯದಮೇಲೆ ದಾಳಿ

ಕೂಡಲೇ ದಾನಾಪುರದಿಂದ ಸೈನ್ಯಸಮೂಹದೊಡನೆ ಕುವರಸಿಂಹನು ಜಗದೀಶಪುರದಿಂದ ಏಳು ಹರದಾರಿಯ ಮೇಲಿದ್ದ ಆರಾದ ಠಾಣ್ಯಕ್ಕೆ ದಾಳಿ ಇಟ್ಟನು. ಇಂಗ್ಲೀಷರಿಗೆ ಈ ಮೊದಲೇ, ಈ ಬಗೆಗೆ ಕನಸು-ಗಿನಸು ಬಿದ್ದಿರಬಹುದು. ಅಂತೆಯೇ ಅವರು ಅಲ್ಲಿ ಸೈನ್ಯ, ಮದ್ದು, ಗುಂಡು ಮುಂತಾದವುಗಳನ್ನು ಸಜ್ಜುಮಾಡಿಟ್ಟಿದ್ದರು. ಕ್ರಾಂತಿಕಾರಕರು ಆರಾದ ಸೆರೆಮನೆಯ ಬಾಗಿಲುಗಳನ್ನೊಡೆದು, ಅಲ್ಲಿದ್ದ ಸೆರೆಯಾಳುಗಳನ್ನು ಬಿಡುಗಡೆ ಮಾಡಿದರು. ಬೊಕ್ಕಸವನ್ನು ಸುಲಿದರು, ಸರಕಾರದ ಕಾಗದಪತ್ರಗಳನ್ನೆಲ್ಲ ಸುಟ್ಟರು. ಠಾಣ್ಯದ ಕೋಟೆಯಮೇಲೆ ಅಡಗಿಕೊಂಡು ಕುಳಿತಿರುವ ಶೀಖ ಮತ್ತು ಇಂಗ್ಲೀಷ ದಂಡಿನವರು ಮೇಲಿಂದ ಕ್ರಾಂತಿಕಾರರ ಮೇಲೆ ಗುಂಡು ಹಾರಿಸಹತ್ತಿದರು. ಈ ಕಾದಾಟವು ಅಖಂಡವಾಗಿ ಏಳುದಿನಗಳವರೆಗೆ ನಡೆಯಿತು. ಇಂಗ್ಲೀಷರಿಗೆ, ಶೀಖರಿಗೆ ನೀರು ಮತ್ತು ಅನ್ನದ ಕೊರತೆ ಆಯಿತು. ಈ ಕದನ ನಡೆಯುತ್ತಿರುವಾಗ ಮತ್ತೆ ದಾನಾಪುರದಿಂದಲೂ, ಕಲಕತ್ತೆಯಿಂದ ಅಲ್ಹಾಬಾದಕ್ಕೆ ಹೋಗುತ್ತಿರುವ ದಂಡಿನವರಿಂದಲೂ ಇಂಗ್ಲೀಷರಿಗೆ ಸೈನ್ಯದ ಬೆಂಬಲ ಸಿಕ್ಕಿತು ಆದರಿಂದ ಕ್ರಾಂತಿಕಾರಕರ ಮತ್ತು ಇಂಗ್ಲೀಷ ಸೈನಿಕರಿಗೆ ಗಜರಾಜಗಂಜದ ಹತ್ತರ ತುಮುಲ ಯುದ್ಧ ನಡೆಯಿತು. ಈ ಯುದ್ಧದಲ್ಲಿ ಕುವರಸಿಂಹನ ದಂಡಿನವರು ಜೀವದ ಹಂಗುತೊರೆದು ಕಾಳಗ ಮೆಸಗಿದರು. ಆದರೆ ಇಂಗ್ಲೀಷರ ಬಹು ದೂರದವರೆಗೆ ಹಾರುವ ತೋಫುಗಳ ಮುಂದೆ ಕುವರಸಿಂಹನ ದಂಡಿನವರು ತಮ್ಮ ನಾಯಕನೊಡನೆ ಜಗದೀಶಪುರಕ್ಕೆ ಓಡಿಹೋಗಬೇಕಾಯಿತು. ಇಂಗ್ಲೀಷರ ದಂಡಿನ ನಾಯಕ ವ್ಹಿನ್ಸೆಂಟ

ಆಯುರ ಎಂಬುವನಿದ್ದನು. ಅವನು ಅವನ ದಂಡಿನವರು ಶತ್ರುಗಳ ಶಿರಗಳನ್ನು ಮನಬಂದಂತೆ ತರಿದು ತಮ್ಮ ತಣಿವನ್ನು ಹಿಂಗಿಸಿಕೊಂಡರು.

## ಜಗದೀಶಪುರಕ್ಕೆ ದಾಳಿ.

ತರುವಾಯ, ಆ ಕೋಟೆಯ ರಕ್ಷಣೆಗಾಗಿ ಕೆಲವು ದಂಡನ್ನು ಅಲ್ಲಿಯೇ ಇಟ್ಟು, ಆಯುರನೇ ಕುವರ ಸಿಂಹನನ್ನು ಬೆನ್ನಟ್ಟಿದನು, ಮತ್ತು ಸಿಂಹನನ್ನು ನಾಲ್ಕೂ ನಿಟ್ಟಿನಿಂದ ಬಂಧಿಸಿ, ಹಿಡಿಯಬೇಕೆಂದು, ಜಗದೀಶಪುರದ ಮೇಲೆ ದಾಳಿನಡಿಸಲು ಬೇರೆ-ಬೇರೆ ಗುಂಪುಗಳನ್ನು ಕಳಿಸಿದನು ಒಂದು ಕಡೆಯು ಇಂಗ್ಲೀಷ ಸೈನಿಕರು ಬರಲಿಕ್ಕೆ ಸ್ವಲ್ಪ ತಡವಾದದ್ದೇ ಕುವರಸಿಂಹನಿಗೆ ಅವಕಾಶದೊರೆಯುವದೇ ತಡ; ಅವನು ತನ್ನ ದಂಡಿನವರೊಡನೆ ಸಸಾರಾಮ ಎಂಬ ಬೆಟ್ಟದೊಳಗೆ ಸೇರಿ, ಎಲ್ಲಿಯೋ ಅದೃಶ್ಯನಾದನು, ಮತ್ತು ತನ್ನರಮನೆಯ ಹೆಂಗಸರನ್ನೆಲ್ಲ ಬೇರೆ ಸುರಕ್ಷಿತ ಸ್ಥಳಕ್ಕೆ ಕಳಿಸುವ ಏರ್ಪಾಟು ಮಾಡಿದನು. ಇದರಿಂದ, ಆಯುರನ ಪಿತ್ತ ತಲೆಗೇರಿತು ಶತ್ರುವು ಕೈಜಾರಿ ಹೋದುದರಿಂದ ಸಂತಪ್ತನಾದ ಅವನು ಜಗದೀಶದಲ್ಲಿಯ ಕುವರ ಸಿಂಹನ ಅರಮನೆಯನ್ನು ಸುಟ್ಟನು ಊರಲ್ಲೆಲ್ಲ ಸುಲಿಗೆ ನಡಿಸಿ, ಕೈಗೆ ಸಿಕ್ಕವರನ್ನೆಲ್ಲ ಹೊಡೆದು, ಬಡಿದು, ಕೊಂದು ಒಂದೇ ಒಂದು ಕೋಲಾಹಲ ಎಬ್ಬಿಸಿದನು. ಅಂದು, ಅಲ್ಲಿ ನಡೆದ ಗೋಳಿನ ಪರಿಯನ್ನು ಹೇಳತೀರದು. ಕುವರಸಿಂಹನು ಕಾಣೆಯಾದ ಮೇಲೆ, ಇಂಗ್ಲೀಷ ಸರಕಾರದವರು ಅವನ ರುಂಡವನ್ನು ತಂದು ಕೊಟ್ಟವರಿಗೆ ೫೦ ಸಾವಿರ ರೂಪಾಯಿ ಕಾಣಿಕೆಯನ್ನು ಕೊಡುವದಾಗಿ ಸಾರಿದರು.

## ಕುವರಸಿಂಹನ ಕಾಯಕ.

ಈ ತೆರನಾಗಿ, ಅದೃಶ್ಯನಾದ ಕುವರಸಿಂಹನು ಬಿಹಾರದ ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿಯ ಪ್ರದೇಶಗಳಿಗೆ ಬಹು ಕುಶಲತೆಯಿಂದ, ಗುಪ್ತವಾಗಿ ಅಡ್ಡಾಡಿ, ಅಲ್ಲಲ್ಲಿಯ ಜನರನ್ನು ಕೂಡುಹಾಕುವ ಸಾಹಸ

ನಡೆಸಿದನು. ಅವನು ಅಯೋಧ್ಯೆಯ ಮೇಲೆ ದಾಳಿ ನಡೆಸಬೇಕೆಂಬ ಹಂಚಿಕೆಯಲ್ಲಿರುವಾಗ, ಅವನಲ್ಲಿ ೫೦ ಸಾವಿರ ಸೈನ್ಯ ಸಮೂಹವಿದ್ದಿತು. ಆದನ್ನವನು ಆಯಾಕಡೆಯಲ್ಲಿಯ ದರಿ-ಕಂದರ, ಗುಡ್ಡ-ಬೆಟ್ಟಗಳಲ್ಲಿ ಅಡಗಿಸಿಟ್ಟು, ಶತ್ರುಗಳೊಡನೆ ಕೂಟ ಯುದ್ಧ ನಡೆಸಲು ಆಜ್ಞಾಪಿಸಿದನು. ಮತ್ತು ಜಗದೀಶಪುರದಲ್ಲಿ ನಡೆಸಿದ ಅನ್ಯಾಯದ ಸೇಡು ತೀರಿಸಲು ಟೊಂಕ ಕಟ್ಟಿದನು. ಅವರೀರ್ವರಲ್ಲಿ ಆತ್ರೋಲೆಯಾ, ಕೋಸಿಲಾ ಮುಂತಾದೆಡೆಗಳಲ್ಲಿ ಒಳ್ಳೇ ಚುರುಕಿನ ಚಕಮಕಿಗಳು ನಡೆದವು. ಅಝುಮಗಡಕ್ಕೂ ಇಂಗ್ಲೀಷರು ದಾಳಿ ಇಟ್ಟರು. ಆದರೆ ಅವರದೇನೂ ಆಟ ನಡೆಯಲಿಲ್ಲ. ಇದರಿಂದ ಕುವರಸಿಂಗನೊಡನೆ ಕಾದಾಡುವದೆಂದರೆ, ಸುಲಭ ಕೆಲಸವಲ್ಲವೆಂದು ಇಂಗ್ಲೀಷ ಅಧಿಕಾರಿಗಳು ಮನಗಂಡರು. ಇಷ್ಟರಲ್ಲಿ ಲಾರ್ಡ ಕ್ಯಾನಿಂಗನು ಲಾರ್ಡ ಮಾರ್ಕಕೇರ ಎಂಬ ದಿಗ್ವಿಜಯಿಯಾದ ಸೇನಾಪತಿಯ ಕೈಯ್ಯಲ್ಲಿ ೫೦೦ ಇಂಗ್ಲೀಷರ ಸೈನ್ಯ ಮತ್ತು ೮ ತೋಫುಗಳನ್ನು ಅಣಿಮಾಡಿ ಕೊಟ್ಟು ಅಝುಮಗಡಕ್ಕೆ ಕಳಿಸಿದನು.

## ಅಝುಮಗಡದ ಕಾಳಗ

ಅಝುಮಗಡದಿಂದ ೮ ಹೈಲಿನ ಮೇಲಿರುವ ಒಂದು ಸ್ಥಳದಲ್ಲಿ ಕುವರಸಿಂಹನ ಸೈನಿಕರಿಗೂ ಇಂಗ್ಲೀಷ ಸೈನಿಕರಿಗೂ ಕೈ ಕೈ ಹತ್ತಿತು. ಈ ಕಾಳಗದೊಳಗೆ ೮೦ ವರ್ಷದ ಕುವರಸಿಂಹನು ಬಿಳೀಕುದುರೆಯಮೇಲೆ ಹತ್ತಿಕೊಂಡು ಬಾಳೆಯ ವನದೊಳಗೆ ಮದ್ದಾನೆ ಹೊಕ್ಕಂತೆ ಶತ್ರುಗಳನ್ನು ಸವರುತ್ತ ಕಾದಿದನು. ಕುವರಸಿಂಹನ ಜನರು ಹೇಳಿಕೇಳಿ ಯುದ್ಧಕಾರ್ಯದಲ್ಲಿ ಅಶಿಕ್ಷಿತರು. ಅವರಲ್ಲಿರುವ ಶಸ್ತ್ರಗಳೆಂದರೆ, ಹಳೆಯ ಕತ್ತಿ-ಡಾಲುಗಳು. ಮತ್ತು ಸ್ವಂತದ ಎದೆಗಾರಿಕೆ ಇವಿಷ್ಟು. ಇಂತಹ ಹರಕು-ಮುರಕು ಶಸ್ತ್ರಾಸ್ತ್ರಗಳಿಂದಲೇ ಮುದಿಯುವಕನಾದ ಕುವರನು ಶತ್ರುಗಳೊಡನೆ ತನ್ನ ಕೈಚಳಕದಿಂದ ಎರಡು-ಮೂರು ತಾಸುಗಳವರೆಗೆ ಹೋರಾಡುತ್ತಲೇ ಇದ್ದು, ಮುಂದೆ ತನ್ನ ಬಲಗುಂದಿದಂತೆ, ಶತ್ರುಗಳನ್ನು ತಪ್ಪಿಸುತ್ತ ಕೆಲವೆಡೆ ಶತ್ರುಗಳಿಗೆ ಬೆನ್ನುಗೊಡುತ್ತ ಹಿಂದೆ ಸರಿಯುತ್ತ, ಮುಂದೆ ಮುಂದೆ ಹೋಗುವರಂತೆ

ನಟಿಸುತ್ತ, ಅವನು ಡೋಣಿಯಲ್ಲಿ ಕುಳಿತು ಗಂಗೆಯನ್ನು ದಾಟಿ ಬರುವಾಗ ಹಿಂದೆ ಎಲ್ಲಿಯೋ ಅವಿತುಕೊಂಡಿರುವ ಶತ್ರುಗಳ ಗುಂಡೊಂದು ಅವನ ಮುಂಗೈಗೆ ತಾಕಿತು. ಆಗ ಅವನು ತನ್ನ ಒರೆಯಿಂದ ಶಸ್ತ್ರವನ್ನು ಹಿರಿದು, ಗಾಯಗೊಂಡ ಮುಂಗೈಯನ್ನೇ ಕತ್ತರಿಸಿ, ಗಂಗೆಗೆ ಅರ್ಪಿಸಿದನು.

## ಆನಂದ ಭರದಲಿ ದುಃಖದ ಆಘಾತ.

ಕುವರ ಸಿಂಹನು ಗಂಗೆಯನ್ನು ದಾಟಿದ ಮೇಲೆ ಉಸ್ಸೆಂದು ನಿಟ್ಟುಸಿರು ಬಿಟ್ಟು, “ಇನ್ನು ಗೆದ್ದೆವು, ಸ್ವಲ್ಪ ದಣಿವಾರಿಸಿಕೊಳ್ಳುವಾ” ಎಂದು ನುಡಿದು, ತನ್ನ ಜನರೊಂದಿಗೆ ವಿಶ್ರಾಂತಿ ಪಡೆಯುವ ಯೋಚನೆ ಮಾಡಿದನು. ಸೈನಿಕರಿಗೂ ಇಷ್ಟು ದಿನಗಳವರೆಗೆ ದಿನ–ರಾತ್ರಿಯನ್ನದೆ ಹಸಿವು–ಬಾಯಾರಿಕೆಯನ್ನದೆ, ವಿರಾಮವಿಲ್ಲದೆ, ಶತ್ರುಗಳೊಡನೆ ಸೆಣಸ್ಯಾಡಿ ಸಾಕಾಗಿತ್ತು. ಹಲವು ತಿಂಗಳಲ್ಲಿ ಆನಂದ–ಸಂತೋಷಗಳ ಸುದ್ದಿಯನ್ನೇ ಅರಿಯದ ಅವರು “ಒಂದು ದಿನವಾದರೂ ವಿಜಯೋತ್ಸವವನ್ನು ಆಚರಿಸಿ, ಆನಂದಪಡುವಾ” ಎಂದು ತಮ್ಮ ಒಡೆಯರಾದ ಕುವರ ಸಿಂಹ, ಅವರ ತಮ್ಮ ಅಮಾರ ಸಿಂಹ ಮೊದಲಾದವರನ್ನು ಆನೆಯ ಮೇಲೆ ಕುಳ್ಳಿರಿಸಿ, ಕಾಳಿ–ಕಹಳೆಗಳ ರಣ ಘೋಷದೊಂದಿಗೆ ಮೆರವಣಿಗೆ ಮಾಡಿದರು; ಆದರೆ, ಹೆಡತಲೆಯಲ್ಲಿ ಕುಣಿಯುತ್ತಿದ್ದ ಮೃತ್ಯುದೇವತೆಯದೂತನಾದ ಇಂಗ್ಲೀಷ ಸೇನಾಪತಿಯ ಮರವು ಅದುದೊಂದು ಮಾಯಕಾರಿಯಾದ ಘಟನೆಯೇ ಸರಿ! ಅವನು ಹಿಂದಿನಿಂದ ಬೆಂಬತ್ತಿ ಬರುವ ಸುದ್ದಿಯನ್ನು ಕೇಳಿ; ಎಲ್ಲರೂ ಜಗದೀಶಪುರಕ್ಕೆ ಓಡಿ ಹೋದರು.

## ಕುವರಸಿಂಗನ ಮರಣ.

ತನ್ನ ಕೈ ಕಡಿದು ಹಾಕಿದ್ದರಿಂದ ಕುವರ ಸಿಂಗನ ಕೈ ಗಾಯಗೊಂಡು ಮರಣಾಂತಿಕ ವೇದನೆಯಾಗುತ್ತಿತ್ತು. ಈ ವೇದನೆಯಿಂದ ಪಾರಾಗಿ ಉಳಿಯುವ ಆಸೆ ಅವನಿಗೆ ತೋಚಿದಂತೆ ಕಾಣಲಿಲ್ಲ. ಆಗಲವನು ತನ್ನ ಹುಟ್ಟೂರಾದ ಜಗದೀಶಪುರವನ್ನು ಒಮ್ಮೆ ನೋಡುವ ಅಪೇಕ್ಷೆಯನ್ನು ಆಡಿ ತೋರಿಸಿ

ದನು. ಅಷ್ಟರೊಳಗಾಗಿ ಜಗದೀಶಪುರವೆಲ್ಲ ಇಂಗ್ಲೀಷರ ಕೈಗೆ ಸಿಕ್ಕು ಹಾಳಾಗಿ ಹೋಗಿತ್ತು. ಕುವರಸಿಂಹನ ಅರಮನೆ, ಊರೊಳಗಿನ ಬಹು ಭಾಗ, ಗುಡಿ-ಗುಂಡಾರಗಳು ಪಾಳು ಬಿದ್ದಿದ್ದವು. ಊರೆಲ್ಲ ಹಾಳು ಸುರಿಯುತ್ತಿತ್ತು. ತನ್ನ ಮಾತೃಭೂಮಿಯ ಸ್ಥಿತಿಯು ಹೀಗಾಯಿತೆಂದು ಆ ವೀರನು ಕಣ್ಣೀರಿನ ಕೋಡಿ ಹರಿಯಿಸಿದನು. ಆಮೇಲೆ, ತಾನಿರಲಿಕ್ಕೆಂದು ಒಂದು ಗುಡಿಸಲವನ್ನು ಸಿದ್ಧಪಡಿಸಿ, ಅಲ್ಲಿಯೇ ಒಂದೆರಡುದಿನ ಕಾಲ ನೂಕುತ್ತಿರುವಾಗ ತನ್ನ ಧ್ವಜದ ನೆರಳಿನಲ್ಲಿಯೇ ಆ ಎಂಬತ್ತು ವರ್ಷದ ಬಿಸಿ ನೆತ್ತರದ ಯುವಕನು ಕೊನೆಯುಸಲ ಕಣ್ಮುಚ್ಚಿದನು.

ಮುಂದೆ ಅವನ ತಮ್ಮನು ಕೆಲವು ದಿನ ಅಂಣನ ಹೋರಾಟವನ್ನೇ ಮುನ್ನಡೆಯಿಸಿದರೂ, ಬ್ರಿಟಿಶರ ಪ್ರಚಂಡ ಸೇನೆಯ ಮುಂದೆ ಕೈಊರಿ ಅಡವಿ ಪಾಲಾಗಬೇಕಾಯಿತು.





## ಮಾನಧನಳಾದ ವೀರ ಮಹಿಳೆ

# ೫. ಝಾಂಸಿ ಲಕ್ಷ್ಮೀಬಾಯಿ

### ದೈವದಾಟ

ಮನುಷ್ಯನು ಬಾಲ್ಯದಲ್ಲಿ ಜಿಗಿದಾಡುವಂತೆ ದೈವಕ್ಕೂ ಆಡುವ ಹೆಂಬಲು. ದೈವದ ಈ ಬಗೆಯ ಚಮತ್ಕಾರಿಕವಾದ ಆಟವನ್ನು ನಾವು ಇಂದಿನ ಪ್ರಸಂಗದಲ್ಲಿ ಬ್ರಹ್ಮಾವರ್ತದಲ್ಲಾಡುವ ನಾನಾಸಾಹೇಬ ಪೇಶವೆ, ತಾತ್ಯಾಟೋಪಿ, ಮತ್ತು ಝಾಂಸಿಯ ಲಕ್ಷ್ಮೀಬಾಯಿ ಈ ಮೂವರ ಗೆಳೆತನದಲ್ಲಿ ಕಾಣಬಹುದು. ಬಾಲ್ಯದಲ್ಲಿ ಒಂದೆಡೆಯಲ್ಲಿ ಸೇರಿ, ಒಡನಾಡಿಗಳಾಗಿ, ಆಡಿದ ಇವರೇ

೧೮೫೭ ರ ಸ್ವಾತಂತ್ರ್ಯ ಸಮರದಲ್ಲಿಯೂ ತೇಜಸ್ವಿಗಳಾದ ಒಡನಾಡಿಗಳಾಗಿ ಬೆಳಗಿದರು. ಈ ಮೂವರ ಹೆಸರು ಭಾರತದ ಇತಿಹಾಸದೊಳಗೆ ಮುಂದೆ ಅಮರವಾಗುವದೆಂದು ಯಾರಾದರೂ ಹೇಳಿದ್ದರೆ ನಂಬುತ್ತಿದ್ದರೇ ? ಯಾರೂ ನಂಬದಂಥ ಘಟನೆಯನ್ನು ದೈವವು ತನ್ನ ಅತರ್ಕ್ಯ ಘಟನೆಯಿಂದ ಒದಗಿಸಿ ತರುವದನ್ನೂ ಅವನನ್ನು ಸೂತ್ರ ಗೊಂಬೆಯನ್ನಾಗಿಸಿ, ಕುಣಿಸುವದನ್ನೂ ಲಕ್ಷಿಸಿದರೆ, ಮಾನವನು ಮೂಕನಾಗುವನಲ್ಲವೇ ?

## ಬ್ರಹ್ಮಾವರ್ತದಲ್ಲಿಯ ಘಟನೆ

ಬ್ರಹ್ಮಾವರ್ತದಲ್ಲಿ ಬಾಜೀರಾಯನಿರುವಾಗ ನಾನಾಸಾಹೇಬ ಅಲ್ಲಿದ್ದನಷ್ಟೇ! ಮುಂದೆ ಮೂರು–ನಾಲ್ಕು ವರ್ಷಗಳಲ್ಲಿಯೇ ತಾಂಬೆ ಮೋರೋಪಂತ ಎಂಬ ಬ್ರಾಹ್ಮಣನು ತನ್ನ ಹೆಂಡತಿ ಮತ್ತು "ಮನೂ" ಎಂಬ ಚಿಕ್ಕ ಮಗಳೊಡನೆ ಅಲ್ಲಿಗೆ ಆಶ್ರಯಕ್ಕಾಗಿ ಹೋದನು. ಆಗ ಅವನ ಮಗಳಿಗೆ ಬಹಳವಾದರೆ ಮೂರು-ನಾಲ್ಕು ವರ್ಷ. ಪಾಂಡುರಂಗ ಪಂತನ ಮಗ ರಘುನಾಥ ಅಥವಾ ಮುಂದೆ ತಾತ್ಯಾ ಟೋಪಿ ಎಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆದ ಹುಡುಗನೂ ಅಲ್ಲಿಯೇ ಇದ್ದನು. ಇವರೆಲ್ಲರೂ ಒಂದೆಡೆಯಲ್ಲಿಯೇ ಇದ್ದುದರಿಂದ ಆಗಾಗ್ಗೆ ಬಾಜೀರಾಯರ ಅರಮನೆಗೆ ಆಡಲಿಕ್ಕೆ ಹೋಗುವದು ಸ್ವಾಭಾವಿಕವಷ್ಟೇ! ಮನೂ ಚಿಕ್ಕಂದಿನಿಂದಲೂ ಬಲು ಮುದ್ದಿನ ಮಗಳಾದ್ದರಿಂದ ಅರಮನೆಯಲ್ಲಿ ಆಕೆಯನ್ನು ಎತ್ತಿ ಆಡಿಸುವದರಲ್ಲಿ ಎಲ್ಲರೂ ಮುಂದಾಗುವರು. ನಾನಾಸಾಹೇಬನು ಏಳೆಂಟುವರ್ಷ ಮನೂಗಿಂತಲೂ ದೊಡ್ಡವನಿದ್ದರೂ, ಆಕೆಯನ್ನು ಒಡಹುಟ್ಟಿದ ತಂಗಿಯಂತೆ ಕಂಡು, ಪ್ರೀತಿಸುವನು. ನಾನಾಸಾಹೇಬನು ಹಬ್ಬ-ಹುಣ್ಣಿವೆಗಳಲ್ಲಿ ಆನೆಯ ಅಂಬಾರಿಯಲ್ಲಿ ಕುಳಿತರೆ, ಮನೂ "ಅಣ್ಣಾ, ನಾನೂ" ಅಂದೊಡನೆ ನಾನಾಸಾಹೇಬನು ಆಕೆಯನ್ನೆತ್ತಿಕುಳ್ಳಿರಿಸಿಕೊಳ್ಳುವನು. ಮನು ನಾನಾಸಾಹೇಬನ ಜೊತೆಯಲ್ಲಿ ಹೀಗೆ ಬೆಳೆಯುತ್ತಿರುವಾಗ ಕುದುರೆಯ ಸವಾರಿ, ಕತ್ತಿಯ ಒರಸೆ, ಓದು–ಬರೆಹ ಮುಂತಾದವುಗಳನ್ನೂ ಆಟವಾಡುವಂತೆ ಕಲಿತಳು; ದೀಪಾವಳಿಯ ಹಬ್ಬದಲ್ಲಿಯಂತೂ, ಭಾವನ ಬಿದಿಗೆಯ ದಿನ ಆ ಮುದ್ದು

ಗುವರಿಯು ಭಂಗಾರದ ತಟ್ಟೆಯಲ್ಲಿ ಎಲ್ಲರಿಗೂ ಆರತಿಯನ್ನೆತ್ತಿದಳು, ಅಂದಿನ ಸಂಭ್ರಮವನ್ನಂತೂ ಹೇಳತೀರದು! ಈ ಮೇರೆಗೆ, ಈ ಬಾಲ-ಬಂಡುಗಾರರು ಬೆಳೆದರು!

## ಮನೂತಾಯಿಯ ಮದುವೆ.

ಮನೂತಾಯಿಯು ಈ ಬಗೆಯಾಗಿ ಅತ್ಯಂತ ಸಿರಿವಂತಿಕೆಯ ಅಚ್ಚೆಯಲ್ಲಿ ಬೆಳೆದಳು. ತಾಯಿಯಿಲ್ಲದ ತಬ್ಬಲಿಯಾದುದರಿಂದ ಬರುಬರುತ್ತ ಆಕೆ ಅರಮನೆಯ "ಹೆಣ್ಣುಮಗಳಾ"ದಳೆನ್ನಬಹುದು. ಅವಳ ಇಂಬಾದ ಮೈಮಾಟ, ಮಾಗಿದ ಕ್ಯಾದಗಿಯಂಥ ಮೈಬಣ್ಣ, ಸಂಪಿಗೆಯಂಥ ಸೀಟಾದ ಮೂಗು, ಹೊಳೆಯುವ ಕಣ್ಣು, ಮುಖದ ಮೇಲೆಲ್ಲ ನಲಿಯುವ ಸಿರಿ-ವಂತಿಕೆಯ ಕಳೆ ಇವುಗಳಿಂದ ಆಕೆ ರಾಣಿಯಂತೆ ಶೋಭಿಸುತ್ತಿದ್ದಳು.

ಈ ಸಮಯಕ್ಕೆ ಝಾಂಸಿಯ ಅರಸನಾದ ಗಂಗಾಧರರಾಯನ ಹೆಂಡತಿಯು ಸತ್ತುದದರಿಂದ ಆವನು ಬೇರೊಂದು ಕನ್ಯೆಯನ್ನು ಮದುವೆಯಾಗಲು ನೋಡುತ್ತಿದ್ದನು. ವರ ಮತ್ತು ಕನ್ಯೆಯ ಜಾತಕಗಳನ್ನು ಶೋಧಿಸಿ ನೋಡಲಾಗಿ, ಅವೂ ಚನ್ನಾಗಿಯೇ ಕೂಡಿ ಬಂದವು. ಒಳ್ಳೇ ವಿಜೃಂಭಣೆಯಿಂದ ಮನೂ ತಾಯಿಯ ಮದುವೆಯ ಸಮಾರಂಭವು ಕೊನೆಗೊಂಡಿತು. ವಾಡಿಕೆಯಂತೆ, ಮನೂ ತಾಯಿಗೆ ಗಂಡನ ಮನೆಯವರು ಲಕ್ಷ್ಮೀಬಾಯಿ ಎಂದು ಹೆಸರಿಟ್ಟರು. ಲಕ್ಷ್ಮೀಬಾಯಿಯ ತಂದೆಗೆ ಅಂದಿನಿಂದ ಝಾಂಸಿ ದರ್ಬಾರದಲ್ಲಿ ಪ್ರಮುಖ ಸರದಾರಿಕೆಯನ್ನು ಕೊಡಲಾಯಿತು. ಈ ರೀತಿಯಾಗಿ, ದೈವಯೋಗದಿಂದ ಒಬ್ಬ ಸಾಮಾನ್ಯ ಬ್ರಾಹ್ಮಣನ ಮಗಳು ಝಾಂಸಿ ಸಂಸ್ಥಾನದ ಒಡತಿಯಾದಳು. ಬುಂದೇಲಖಂಡದ ಸಂಸ್ಥಾನಗಳಾದ ದತಿಯಾ, ಚಿರ್ಖಾರಿ, ಪನ್ನಾ, ಛತ್ರಪುರ ಮುಂತಾದವುಗಳಂತೆ ಝಾಂಸಿಯೂ ಬಲಿಷ್ಠ ಸಂಸ್ಥಾನ ಅರಸನಲ್ಲಿ ೫ ಸಾವಿರ ಕಾಲ್ದಳ, ೫ ನೂರು ಕುದುರೆ ಸವಾರರು, ನೂರಾರು ಕುದುರೆಗಳದೊಂದು ಸ್ವತಂತ್ರ ಲಾಯ, (ಪಾಗಾ) ಮೇಲಾಗಿ, ೪ ತೋಫುಖಾನೆಗಳಿದ್ದವು. ಸಂಸ್ಥಾನಿಕನು ಮಿಕ್ಕ ಸಂಸ್ಥಾನಿಕರ ಮನ್ನಣೆಗೆ ಪಾತ್ರನಾಗಿದ್ದನು.

## ನನ್ನ ಝಾಂಸಿಯನ್ನು ಬಿಡಲಾರೆ.

ಕಾಲನ ಲೀಲೆಯನ್ನು ತಡೆಯುವರಾರು? ಇಂದಿನ ಸ್ಥಿತಿಯು ನಾಳೆ ಇರುವದಿಲ್ಲ ನಾಳಿನದು ನಾಡಿದ್ದು ಇರದು; ಅಂದ ಮೇಲೆ, ಮಾನವನ ಇಚ್ಛೆಗಾಗಿ ಅದೆಂದಾದರೂ ಒಲಿಯುವದುಂಟೇ? ಈ ಮೇರೆಗೆ, ಇಡಿಯ ಜಗತ್ತೇ ಕಾಲನ ಕೈಯಲ್ಲಿಯ ಗೊಂಬೆಯಂತೆ ತಿರುಗುತ್ತಿರುವಾಗ ಯಾರ ಪಾಡನ್ನು ಏನೆಂದು ಹೇಳುವದಕ್ಕೆ ಸಾಧ್ಯವು! ಹೀಗೆ ಲಕ್ಷ್ಮಿಬಾಯಿಯು ತನ್ನ ಅರಸೊತ್ತಿಗೆಯ ಸುಪ್ಪತ್ತಿಗೆಯಲ್ಲಿ ಓಲಾಡುತ್ತಿರುವಾಗ, ಗಂಡು ಮಗು ವನ್ನು ಹೆತ್ತಳು ಅರಸನಿಗೆ ಗಂಡುಮಗು ಹುಟ್ಟುವದೆಂದರೆ, ಅದೊಂದು ಹೆಚ್ಚಿನ ಪುಣ್ಯದ್ಯೋತಕವೆಂದು ನಂಬಿಗೆಯಷ್ಟೇ! ಅದಕ್ಕೆ ತಕ್ಕಂತೆ, ಸಂಸ್ಥಾ ನದಲ್ಲಿ ಸಂತೋಷ ಸೂಚಕ ಉತ್ಸವಾದಿಗಳು ನಡೆದವು; ಆದರೆ, ಮೂರು ತಿಂಗಳಲ್ಲಿಯೇ ಆ ಮೋಹದ ಮಗುವು ಮಡಿಯಿತು. ಮಗನ ಮುಖವನ್ನು ಕಂಡೆನೆಂಬ ಆನಂದದೊಳಗೆ ಗಂಗಾಧರರಾಯರು ಇರುವಾಗಲೇ, ಕಾಲನು ತನ್ನ ಮಗುವನ್ನು ಒಯ್ದುದಕ್ಕಾಗಿ ತಂದೆಗೆ ಸಿಡಿಲು ಬಡಿದಂತಾಗಿ, ಅವನು ಹೃದ್ರೋಗದಿಂದ ದಿನ ದಿನಕ್ಕೂ ನವೆಯಹತ್ತಿದನು. ಎಷ್ಟು ಉಪಾಯ ಮಾಡಿದರೂ, ಗಂಗಾಧರರಾಯನಿಗೆ ಗುಣವಾಗುವ ಲಕ್ಷಣಗಳು ತೋರ ಲಿಲ್ಲ; ಆಗ, ಅವನು ತನ್ನ ಸಂಸ್ಥಾನದ ಮುಂದಿನ ಆಡಳಿತದ ಸ್ಥಿತಿಯನ್ನು ಲಕ್ಷಿಸಿ, ತಮ್ಮ ನೆಂಟರಲ್ಲಿಯ ಆನಂದ ಎಂಬ ಐದು ವರ್ಷದ ಹುಡುಗನನ್ನು ಶಾಸ್ತ್ರದಂತೆ ದತ್ತಕ ಮಾಡಿಕೊಂಡನು. ಮತ್ತು ಮಗುವಿಗೆ ದಾಮೋದರ ಎಂದು ಹೆಸರಿಟ್ಟು, ತನ್ನ ನಿಜಸ್ಥಿತಿ ಮಗನನ್ನು ದತ್ತಕ ಮಾಡಿಕೊಂಡಿರುವ ಸಂಗತಿ ಮುಂತಾದವುಗಳನ್ನೆಲ್ಲ ಆಗಿನ 'ವೈಸರಾಯರಾದ ಡಾಲಹೌಸಿಗೆ ತಿಳಿಸಿದನು. ಮುಂದೆ, ಒಂದೆರಡು ದಿನಗಳಲ್ಲಿಯೇ ಗಂಗಾಧರರಾಯನು ಮಡಿದನು. ಲಕ್ಷ್ಮೀಬಾಯಿಯು ತನ್ನ ಗಂಡನು ದತ್ತಕ ತೆಗೆದುಕೊಂಡಿರುವ ಮಗುವಿನ ರಾಜ್ಯದ ನ್ಯಾಯವಾದ ಹಕ್ಕುದಾರಿಕೆಯನ್ನು ಮನ್ನಿಸಿಲು ಬ್ರಿಟೀಶ ಸರಕಾರದವರಿಗೆಬಿನ್ನವಿಸಿದಳು. ಆದರೆ ಅದನ್ನವರು ಗಮನಿಸಿರಲಿಲ್ಲ. ಬುಂದೇಲ ಖಂಡದ ರಾಜಕೀಯ ವಿಭಾಗದ ಏಜಂಟನು ಒಂದುದಿನ ಝಾಂಸಿಗೆ ಬಂದನು. ಆಗ ರಾಣಿಯು ತನ್ನ ಓಲಗದೊಳಗೆ ಪರದೆಯ ಮರೆಯಲ್ಲಿ ಕುಳಿತು ರಾಜ್ಯ

ಭಾರದ ವಿಚಾರಣೆಯನ್ನು ನಡೆಯಿಸಿದ್ದಳು. ಏಜಂಟನು ಗವ್ಹರ್ನರ ಜನರಲ್ಲ ಲಾರ್ಡ ಡಾಲಹೌಸಿಯ ಆಜ್ಞೆಯನ್ನು ರಾಣಿಗೆ ಓದಿ ತೋರಿಸುತ್ತಿರುವಾಗಲೇ ಆಕೆಯ ಮುಖ ಕೆಂಪೇರಿತು. ಕಣ್ಣುಗಳಿಂದ ಕಿಡಿಗಳನ್ನು ಕಾರುತ್ತ "ನನ್ನ ಝಾಂಸಿಯನ್ನು ನಾನೆಂದೂ ಬಿಡಲಾರೆ" ಎಂದು ನುಡಿದಳು. ಆಕೆಗೆ ತಿಂಗಳಿಗೆ ೫ ಸಾವಿರ ರೂಪಾಯಿ ಉಂಬಳಿ ಹಾಗೂ ಇರಲಿಕ್ಕೆ ಊರೊಳಗಿನ ಅರಮನೆ ಇಷ್ಟು ಕೊಟ್ಟರು. ನಿನ್ನೆ ಮೊನ್ನೆ ಸುಖವಿಲಾಸಗಳಲ್ಲಿ ತೇಲಾಡುತ್ತಿದ್ದವಳು ಇಂದು ನಿರಾಶೆ ಮತ್ತು ದುಃಖದ ಮಡುವಿಗೆ ಸಿಲುಕಿ ತೊಳಲ ಹತ್ತಿದಳು.

## ಗಂಡ ಸತ್ತಮೇಲಿನ ಜೀವನ

ಹೊಟ್ಟೆಯ ಕರುಳಿನ ಕಂದ ಹೋಯಿತು. ಸೌಭಾಗ್ಯದ ನಿಧಿಯಾದ ಪತಿರಾಜನು ತೊಲಗಿದನು, ಸಾಲದುದಕ್ಕೆ ಪರಂಪರೆಯಿಂದ ನಡೆದುಬಂದ ರಾಜ್ಯವೂ ಕೈಬಿಟ್ಟು ಹೋಯಿತು. ಹೀಗೆ ಒಂದರ ಮೇಲೊಂದು ಜೀವನದಲ್ಲಿಯ ಸೊಬಗನ್ನು ಕಮರಿಸುವ ಪೆಟ್ಟುಗಳು ತಾಕಿದ್ದರಿಂದ, ಆಕೆಯ ಜೀವನದೊಳಗಿನ ಸ್ವಾರಸ್ಯವೇ ಮಾಯವಾಯಿತು. ಮನಸ್ಸು ಅರೆಸತ್ತಂತಾಗಿ ಜೀವನವೇ ಬೇಸರಾಯಿತು. ಅದರ ಪರಿಣಾಮವಾಗಿ, ಲಕ್ಷ್ಮೀಬಾಯಿಯು ಸತ್ತಬಾಳನ್ನು ಹೇಗೋ ನೂಕಲಾರಂಭಿಸಿದಳು. ಮಾತ್ರ ಆಕೆಯ ಹೊಟ್ಟೆಯಲ್ಲಿ ಅಸಂತೋಷದ ಧಗೆಯು ಒಂದೇ ಸವನೇ ಉರಿಯುತ್ತಿತ್ತು. ಅದರ ಬೇಗೆಗೆ ಆಕೆಯ ಮುಖ ಕಂದಿ ಕುಂದಿದಂತಾಗಿತ್ತು; ಹೀಗಿದ್ದರೂ ಅದನ್ನು ಮೇಲೆ ತೋರಗೊಡದೆ, ಧರ್ಮಕಾರ್ಯ, ವ್ರತ, ನಿಯಮ, ದೇವರ ಪೂಜೆ, ರಾಮನಾಮಸ್ಮರಣೆ, ಪುರಾಣ-ಶ್ರವಣ ಮುಂತಾದವುಗಳಲ್ಲಿಯೇ ಕಾಲಯಾಪನೆ ಮಾಡುತ್ತಿದ್ದಳು. ಆಕೆಯ ಆಗಿನ ಉಡುಪು-ತೊಡಪು ಅಂದರೆ ಶುಭ್ರವಾದ ಸೀರೆ-ಕುಪ್ಪುಸ ಕೈಯ್ಯಲ್ಲಿನ ವಜ್ರದ ಬಳೆಗಳು, ಕೊರಳಲ್ಲಿ ಮುತ್ತಿನದೊಂದು ಸರ, ಬೆರಳಲ್ಲಿ ಒಂದು ವಜ್ರದ ಉಂಗುರ ಇವಿಷ್ಟು. ಮಂಗಳವಾರ ಮತ್ತು ಶುಕ್ರವಾರ ದಿನಗಳಲ್ಲಿ ರಾಣಿಯು ಮಹಾಲಕ್ಷ್ಮೀ ದೇವಾಲಯಕ್ಕೆ ದರ್ಶನಕ್ಕಾಗಿ ಹೋಗುವಳು. ತನ್ನ ಸಂಸ್ಥಾನವನ್ನು ಬ್ರಿಟೀಶರು ತಮ್ಮ ಆಡಳಿತಕ್ಕೆ ಸೇರಿಸಿಕೊಂಡ ತರುವಾಯ ರಾಣಿಯು ಝಾಂಸಿಯ

ಪ್ರಜೆಗಳ ವಿಷಯದಲ್ಲಿ ಅಷ್ಟೊಂದು ಮಮತೆಯನ್ನು ತೋರ್ಪಡಿಸಲು ಸಂದರ್ಭ ವಿರಲಿಲ್ಲ; ಆದರೂ, ಒಂದುದಿನ ರಾಣಿಯು ದೇವಾಲಯದಿಂದ ಬರುವಾಗ ದಾರಿಯಲ್ಲಿ ಸಾವಿರಾರುಜನ ಭಿಕ್ಷುಕರು ನೆರೆದ ಸಮೂಹವನ್ನು ಕಂಡಳು ತನ್ನ ಜೊತೆಯಲ್ಲಿದ್ದ ಮಂತ್ರಿಗೆ ಜನರು ನೆರೆದ ಕಾರಣವೇನೆಂದು ವಿಚಾರಿಸಲಾಗಿ "ಚಳಿಗಾಲದ ಚಳಿಯನ್ನು ತಾಳಲಿಕ್ಕಾಗದೆ ತಮ್ಮಿಂದ ಬಡ ಬಗ್ಗರು ಏನಾದರೂ ವಸ್ತ್ರದಾನವನ್ನು ಅಪೇಕ್ಷಿಸುತ್ತಿರುವರು." ಎಂದು ನಿವೇದಿಸಿದರು. ಆಗ ರಾಣಿಯ ಮನಸ್ಸು ಕರಗಿ, ಬಂದಷ್ಟು ಬಡವರಿಗೆ ದಪ್ಪಾದ ಅಂಗಿ, ಟೊಪ್ಪಿಗೆ ಮತ್ತು ರಾತ್ರಿ ಹೊದ್ದುಕೊಳ್ಳಲು ಬೆಚ್ಚಗಿನ ಕಂಬಳಿ ಇಷ್ಟು ಹಂಚಿದಳು. ನಾಥೇಖಾನನು ದಂಗೆ ಎಬ್ಬಿಸಿದ ಕಾಲಕ್ಕೆ ಹಲವರು ಗಾಯಗೊಂಡು ಬಳಲುತ್ತಿರುವಾಗ ರಾಣಿಯು ಮುಂದೆ ನಿಂತು, ಎಲ್ಲರ ಗಾಯಗಳನ್ನು ತೊಳೆಯಿಸಿ, ಔಷಧ ಹಚ್ಚಿಸಿದಳು. ಕಷ್ಟದೊಳಗೆ ಅವರಿಗೆ ಮಿದು ಮತ್ತು ಅಂತಃಕರಣದ ಮಾತುಗಳಿಂದ ಸಹಾನುಭೂತಿಯನ್ನು ವ್ಯಕ್ತ ಪಡಿಸುವಳು. ಇವೆಲ್ಲ ಸದ್ಗುಣಗಳಿಂದ ಎಲ್ಲರಿಗೂ ರಾಣಿಯು ಹಡೆಯದೆ-ಹಿಂಗದೆ ತಾಯಾಗಿದ್ದಳು.

## ಝಾಂಸಿಯಲ್ಲಿ ದಂಗೆ ಮತ್ತು ಸ್ವಾತಂತ್ರ್ಯ.

ಉತ್ತರದಲ್ಲಿಯ ಮಿರತ, ದಿಲ್ಲಿ, ಅಯೋಧ್ಯಾ, ಕಾನಪುರ, ಬರೇಲಿ, ಫಿರೋಜಪುರ ಮುಂತಾದೆಡೆಗಳಲ್ಲಿದ್ದ ಸ್ವಾತಂತ್ರ್ಯ ಸಂಗರದ ಝಳವು ಝಾಂಸಿಗೆ ಬಂದು ತಗಲಿತು. ಕೂಡಲೇ ಝಾಂಸಿಯಲ್ಲಿಯ ದೇಶೀಯ ಸೀಪಾಯರು, ತೋಫಖಾನೆಯವರು, ಕುದುರೆ ಸವಾರರು, ದಂಗೆ ಎಬ್ಬಿಸಿ, ದಂಡಿನಲ್ಲಿದ್ದ ಬಿಳಿಯರನ್ನೆಲ್ಲ ಕಡಿದು ಹಾಕಿ, ಝಾಂಸಿಯ ಕೋಟೆಯನ್ನು ತಮ್ಮ ತಾಯಿ ರಾಣಿಯಾದ ಲಕ್ಷ್ಮೀಬಾಯಿಯ ವಶಕ್ಕೆ ಕೊಟ್ಟು, ಆಕೆಯ ಹೆಸರಿನಿಂದ ಜಯಘೋಷ ಮಾಡಿದರು. ಅಂದಿನಿಂದ ರಾಣಿಯು ಮಹೋತ್ಸವದಿಂದ ತನ್ನ ಝಾಂಸಿಯ ಆಳಿಕೆಯನ್ನು ತನ್ನ ಕೈಯ್ಯಲ್ಲಿ ತೆಗೆದು ಕೊಂಡು ಪುನಃ ಆಳಲಾರಂಭಿಸಿದಳು. ಕಟ್ಟೆಯ ಕಲ್ಲು ಕಟ್ಟೆಗೆ ಕುಳಿತಂತೆ ಆಯಿತು. ತನ್ನ ವಶಕ್ಕೆ ತನ್ನ ರಾಜ್ಯ ಬಂದೊಡನೆ ಆಕೆಯು ಮೊದಲಿನಂತೆ

ರಾಜ್ಯ ಸುಧಾರಣೆಯ ಕೆಲಸದಲ್ಲಿ ನಿರತಳಾದಳು. ತನ್ನ ರಾಜ್ಯದೊಳಗೊಂದು ಮದ್ದು-ಗುಂಡುಗಳನ್ನು ಮಾಡುವ ಕಾರಖಾನೆಯನ್ನು ತೆರೆದಳು. ಕಳೆದು ಕೊಂಡಿರುವ ತನ್ನ ಝಾಂಸಿಯ ರಾಜ್ಯಭಾರವು ಮತ್ತೆ ತನ್ನ ಕೈಗೆ ಬಂದುದ ರಿಂದ, ಆಕೆಯ ಆನಂದವು ಇಮ್ಮಡಿಸಿತು. ಹಿಂದಿನ ನಿರಾಶೆಯ ದಿನಗಳ ಕಷ್ಟವನ್ನೆಲ್ಲ ಮರೆತು, ಒಳ್ಳೇ ಹುರುಪಿನಿಂದ ರಾಜ್ಯ ನಡೆಸಿದಳು. ಲಕ್ಷ್ಮೀ ಬಾಯಿಯ ಬುದ್ಧಿ ಚುರುಕು ಇರುವದರಿಂದ ರಾಣಿಗೆ ಹೊಸ-ಹೊಸ ವಿಚಾರ ಗಳು ಸ್ಫುರಿಸಿದಂತೆ, ತನ್ನ ರಾಜ್ಯದಲ್ಲಿ ಯೋಗ್ಯ ತಿದ್ದುಪಾಟುಗಳನ್ನು ಮಾಡುವದರಲ್ಲಿ ಎಂದೂ ತಡ ಮಾಡುತ್ತಿರಲಿಲ್ಲ. ತನ್ನ ಕೈಗೆ ರಾಜ್ಯ ಬಂದಂದಿನಿಂದ ಬಾಯಿಯು ತನ್ನ ಯಜಮಾನರಂತೆಯೇ ರಾಜ್ಯ ಪದ್ಧತಿ ಯನ್ನು ಅನುಸರಿಸುವಳು. ಮಧ್ಯಾಹ್ನ ಓಲಗಕ್ಕೆ ಹೋಗುವಾಗ, ಆಕೆಯು ಒಮ್ಮೊಮ್ಮೆ ಚಣ್ಣ, ಅಂಗಿ, ರುಮಾಲಗಳನ್ನು ಹಾಕಿಕೊಂಡು ಹೋಗುವಳು. ಓಲಗದಲ್ಲಿಯೇ ಒಂದೆಡೆಯಲ್ಲಿ ತೆಳುವಾದ ಪರದೆಯನ್ನು ಬಿಟ್ಟು, ಅದರ ಹಿಂದೆ ಕುಳ್ಳಿರುವಳು. ಈ ಮೇರೆಗೆ ೮-೧೦ ತಿಂಗಳ ಕಾಲ ಕಳೆದು ಹೋಯಿತು.

## ಝಾಂಸಿಯ ಮೇಲೆ ಧಾಳಿ.

೧೮೫೮ ನೆಯ ಇಸ್ವಿಯ ಪ್ರಾರಂಭಕ್ಕೆಂದರೆ, ತಮ್ಮ ಕೈ ಬಿಟ್ಟು ಹೋದ ಪ್ರಾಂತವನ್ನೆಲ್ಲ ಬ್ರಿಟಿಶರು ತಿರುಗಿ ಗೆಲ್ಲುವಂತೆ ದಂಡಿನ ಯೋಜನೆಯನ್ನು ಮಾಡಿಕೊಂಡರು. ಹಿಮಾಲಯದಿಂದ ವಿಂಧ್ಯಾದ್ರಿಯ ವರೆಗಿನ ಸೀಮೆಯೆಲ್ಲ ಆಗ ಕ್ರಾಂತಿಕಾರಕರ ವಶದಲ್ಲಿಯೇ ಇದ್ದಿತು ಹೊಸ ವರ್ಷವು ಕಾಲಿಟ್ಟೊ ಡನೆ ಬಂಡಾಯದ ಬಿರುಗಾಳಿಯು ಮೆಲ್ಲಗೆ ಕುಂದಲು ಮೊದಲಾಯಿತು. ದಿಲ್ಲಿಯ ಅರಮನೆ, ಕಾನಪುರ, ಲಖನೌಗಳ ಮೇಲೆ ಬ್ರಿಟೀಶರ ನಿಶಾನೆಯು ಫಡ ಫಡಿಸ ಹತ್ತಿತು. ಕ್ರಾಂತಿಕಾರಕರ ಮುಖ್ಯಕೇಂದ್ರಗಳಾದ ಇವು ಮೂರು ಬ್ರಿಟೀ ಶರ ಕೈ ಸೇರಿದ ಮೇಲೆ ಅವರು ಝಾಂಸಿಯ ನಿಟ್ಟಿನಿಂದ ಹೊರಟರು. ಹೋದ ಲ್ಲೆಲ್ಲ ತಮಗಾಗುವ ಗೆಲುವಿನಿಂದ ಉಬ್ಬಿದ ಇಂಗ್ಲೀಷ ದಳವಾಯರು ಝಾಂಸಿ ಯಿಂದ ೧೪ ಮೈಲುಗಳ ಅಂತರದಲ್ಲಿರುವ ಒಂದೆಡೆಯಲ್ಲಿ ತಮ್ಮ ಬೀಡು ಬಿಟ್ಟರು. ಈ ಹೊತ್ತಿಗೆ ತಾತ್ಯಾಟೋಪಿಯು ಚರ್ಖಾರಿ ಅರಸನ ಕೋಟೆಯನ್ನು

ಮುತ್ತಿ, ಅವನನ್ನು ಹಿಂಸೆಪಡಿಸುತ್ತಿದ್ದನು. ತಾತ್ಯಾನ ಉರುವಣಿಗೆಯಿಂದ ತನ್ನನ್ನು ಪಾರು ಮಾಡಲಿಕ್ಕೆ ಚರ್ಖಾರಿ ಅರಸನು ಆಗಲೇ ಬ್ರಿಟೀಶರಿಗೆ ಬಿನ್ನವಿಸಿಕೊಂಡಿದ್ದನು. ಅವನ ಆಜ್ಞೆಯಂತೆ ಝಾಂಸಿಯ ದಾಳಿಯ ಕೆಲಸವನ್ನು ಅರ್ಧಕ್ಕೆ ಬಿಟ್ಟು ಹೋದರೆ, ಇಷ್ಟುದಿವಸ ಮಾಡಿದ್ದೆಲ್ಲ ಮಣ್ಣು ಗೂಡುವದೆಂದು ರಾಬರ್ಟ ಹ್ಯಾಮಿಲ್ಟನ್ನನು ಹಿಂದುಸ್ಥಾನ ಸರಕಾರದ ಆಜ್ಞೆಯನ್ನು ಮೂಲೆಗೊತ್ತಿರಿಸಿ, ಗೆಲುವಿನ ಆಶೆಯಿಂದ ಝಾಂಸಿಯಕಡೆಗೆ ದಂಡೆತ್ತಿ ಹೋದನು. ಇತ್ತ ಲಕ್ಷ್ಮೀಬಾಯಿಯು ಇಂಗ್ಲೀಷರ ಸೈನ್ಯವು ಝಾಂಸಿಯ ಮೇಲೆ ದಂಡೆತ್ತಿ ಬರುವ ವರ್ತಮಾನವನ್ನು ಕೇಳಿದೊಡನೆ ಶತ್ರುಗಳಿಗೆ ದಾರಿಯಲ್ಲಿ ಯಾವ ಬಗೆಯ ಅನ್ನ-ನೀರಿನ ಸಾಮುಗ್ರಿ ಸಿಗದಂತೆ ಏರ್ಪಡಿಸಿದಳು. ತನ್ನ ಊರಿನ ಹಾಗೂ ಸುತ್ತಮುತ್ತಲಿನ ಊರುಗಳಲ್ಲಿಯ ಜನರು ದಾಳಿಯ ಬಾಯಿಗೆ ಸಿಗದಂತೆ ಎಚ್ಚರಿಕೆಯಿಂದಿರಬೇಕಾಗಿಯೂ, ಐದಾರುವರ್ಷಕ್ಕೆ ಮಿಕ್ಕಿದ ಮತ್ತು ಎಂಭತ್ತು ವರ್ಷದ ಒಳಗಿನವರು ತಮ್ಮ ತಮ್ಮ ಜೀವಿತ ಮತ್ತು ಆಸ್ತಿಯ ವ್ಯವಸ್ಥೆ ಮಾಡಿಕೊಳ್ಳಬೇಕೆಂದು ಡಂಗುರ ಸಾರಿಸಿದಳು. ನಾನಾಸಾಹೇಬ ಪೇಶವೆ, ತಾತ್ಯಾ ಟೋಪಿ ಮೊದಲಾದವರಿಗೆ ಸವಾರರೊಂದಿಗೆ ಝಾಂಸಿಯ ದಾಳಿಯ ಸಂಗತಿಯನ್ನು ತಿಳಿಸಿ, ಅವರ ಸಹಾಯವನ್ನು ಕೋರಿದಳು. ಬುಂದೇಲಖಂಡದಲ್ಲಿಯ ಅರಸರು ವೀರಾಳುಗಳಾದ ಠಾಕೂರರು, ಸರದಾರರು, ಲಕ್ಷ್ಮೀಬಾಯಿಯನ್ನು ದೇವತೆಯಂತೆ ಮನ್ನಿಸುತ್ತಿದ್ದರು. ಆಕೆಯ ದೆಸೆಯಿಂದ ತಮ್ಮ ಪ್ರಾಣಗಳನ್ನು ಈಡಾಡಲು ಯಾವಾಗಲೂ ಸಜ್ಜಾಗಿದ್ದರು. ಅವರನ್ನೆಲ್ಲ ಕರೆಯಿಸಿ, ಅವರ ಅಭಿಪ್ರಾಯ ಕೇಳಿಕೊಂಡಳು. ಮಾನಕ್ಕಾಗಿ ಹೋರಾಡಿ ಸಾಯಬೇಕೋ, ಶತ್ರುಗಳಿಗೆ ಶರಣುಹೊಕ್ಕು ಸತ್ತ ಬಾಳುವೆಯಿಂದ ಜೀವಿಸಬೇಕೋ ಎಂಬೆರಡು ಜೀವಾಳದ ಮಾತುಗಳು ಲಕ್ಷ್ಮೀಬಾಯಿಯ ಮನಸನ್ನು ಕಲಕುಮಲಕು ಮಾಡಿದ್ದವು. ತನ್ನ ಮಟ್ಟಿಗೆ ಆಕೆಯ ಮನಸು ವಜ್ರಕ್ಕಿಂತ ಬಿರುಸಾಗಿದ್ದರೂ, ಎರಡನೆಯರ ಪಾಡಿನ ವಿಚಾರವೇನು? ಎಂಬುದೇ ಮುಖ್ಯ ಪ್ರಶ್ನೆಯಾಗಿತ್ತು ಈ ಪ್ರಶ್ನೆಯನ್ನವಳು ನೆರೆದ ತನ್ನ ಜನರ ಮುಂದೆ ಮಂಡಿಸಿದಾಗ, ಸತ್ತ ಬಾಳುವೆಗಿಂತ, ಸತು ಕೀರ್ತಿರೂಪದಿಂದ ಬದುಕಿರುವ ಬಾಳು ಮೇಲು;

ಎಂಬ ಮಾತಿಗೆ ಎಲ್ಲರೂ ಒಪ್ಪಿದರು. ಮಾನಧನರಿಗೆ ಸಾವೆಂಬುದು ಮಹಾ ನವಮಿಯ ಹಬ್ಬವಷ್ಟೇ ?

## ಶತ್ರುಗಳನ್ನೆದುರಿಸುವ ಸಿದ್ಧತೆ.

ತನ್ನ ದೇಶದ ಮಾನವನ್ನು ಕಾಯುವದು ಮಾನವ ಧರ್ಮ. ಆ ಕಾರ್ಯದಲ್ಲಿ ಅವನು ತನ್ನ ದೇಹವನ್ನು ಬಲಿಕೊಡುವದೇ ಅವನ ಕರ್ತವ್ಯ ವೆಂದು ಸಿದ್ಧವಾದ ಮೇಲೆ ಝಾಂಸಿಯವರು ಕಾಳಗದ ಸಿದ್ಧತೆಗಾಗಿ ಸೌರಣೆ ನಡೆಯಿಸಿದರು. ಹಗಲಿರುಳು ಗಂಡಸರಿಗೆ–ಹೆಂಗಸರಿಗೆ ಪುರಸತ್ತು ಇರಲಿಲ್ಲ. ಅವರು ಶೂರ–ವೀರ ಜನರಿದ್ದರೂ, ಯುದ್ಧ ಕಲೆಯಲ್ಲಿ ಪಳಗಿದವರಲ್ಲ. ರಾಣಿಯೇ ಮುಂದಾಳಾಗಿ ಸೈನ್ಯ ಹಾಗೂ ಕೋಟೆಯ ವ್ಯವಸ್ಥೆಯನ್ನು ನೋಡುತ್ತಲೂ ಆಯಾ ಜನರಿಗೆ ಆಯಕಟ್ಟಿನ ಸ್ಥಳಗಳಲ್ಲಿ ತೋಪುಗಳನ್ನು ಇಡಿಸಲು ಹೇಳುತ್ತಿದ್ದಳು. ತೋಫ ಖಾನೆಯಮೇಲೆ ಯೋಗ್ಯ ಜನರನ್ನು ಆರಿಸಿ, ಅವರಿಗೆ ಕೆಲಸಗಳನ್ನು ಒಪ್ಪಿಸುತ್ತಿದ್ದಳು ಸೀಪಾಯರು ತಮ್ಮ ತಮ್ಮ ಬಂದೂಕು ತುಪಾಕಿಗಳಲ್ಲಿ ಮದ್ದು ಜಡಿದು ತುಂಬುತ್ತಿದ್ದರು. ಅವ ರಿಗೆ ಮದ್ದಿನ ಕಾರಖಾನೆಯಿಂದ ಹೆಂಗಸರು ಮದ್ದು–ಗುಂಡುಗಳನ್ನೊಯ್ದು ಕೊಡುತ್ತಿದ್ದರು. ಊರೊಳಗಿನ ದೇವಾಲಯ, ಗುಡಿ ಗುಂಡಾರಗಳಲ್ಲೆಲ್ಲ ಬ್ರಾಹ್ಮಣರು ರಾಣಿಗೆ ಗೆಲವಾಗಲೆಂದು, ದೇವರ ಆರಾಧನೆ ನಡೆಸಿದ್ದರು. ರಾಣಿಯು ತನ್ನ ಕುದುರೆಯನ್ನೇರಿ, ಸೆಳೆ ಮಿಂಚಿನಂತೆ, ಅಲ್ಲಿಂದಿಲ್ಲಿ-ಇಲ್ಲಿಂದಲ್ಲಿ ಬಗೆ–ಬಗೆಯ ಚಟುವಟಿಕೆಗಳಲ್ಲಿ ಓಡಾಡುತ್ತಿದ್ದಳು.

## ಝಾಂಸಿಗೆ ಇಂಗ್ಲೀಷರ ದಂಡು.

ವೈಶಾಖ ಮಾಸ ಬಂತು. ಒಂದು ದಿನ ಝಾಂಸಿಯ ದಕ್ಷಿಣ ಭಾಗ ದಲ್ಲಿ ಡೇರೆಗಳು ಕಂಡವು. ಅಲ್ಲಲ್ಲಿ ಜನರ ಗುಜುಗುಜು. ಅವರು ಬೆಂಕೆ ಹೊತ್ತಿಸಿ ಏನೇನೋ ಕೆಲಸ-ಬಗಸೆಗಳನ್ನು ನಡೆಸಿದ್ದರು. ಅದೇ ದಿನ ರಾತ್ರಿ ಒಬ್ಬ ದೂತನು ಬಂದು ಇಂಗ್ಲೀಷರ ಸೈನ್ಯವು ಸುಮಾರು ೬೦ ಸಾವಿರ ದಷ್ಟು ಬಂದು ಬೀಡು ಬಿಟ್ಟಿದ್ದು, ಮುತ್ತಿಗೆ ಹಾಕುವ ಹಂಚಿಕೆಯಲ್ಲಿರುವ

ದಾಗಿ ಹೇಳಿದನು. ಆಗಲೇ ರಾಣಿಯು ತನ್ನ ಕೋಟೆ ಮತ್ತು ಊರಿನ ಸುತ್ತೆಲ್ಲ ಅಡ್ಡಾಡಿ, ಅಲ್ಲಲ್ಲಿ ಬುರುಜುಗಳಮೇಲೆ ದಂಡಿನವರನ್ನು ಇರಿಸಿದಳು. ಆ ದಿನ ರಾತ್ರಿ ಊರಲ್ಲೆಲ್ಲ ರಣಕಾಳಿ, ಮತ್ತು ರಣವಾದ್ಯಗಳ ಕೋಲಾಹಲ. ಕೋಟೆಯಮೇಲೆ ದೀವಟಿಗೆ ಮತ್ತು ಪಂಜುಗಳನ್ನುರಿಸುವ ಗಲಾಟೆ. ಈ ಗಡಿಬಿಡಿಯಲ್ಲಿರುವಾಗ ೨೦-೨೫ ಜನ ಕುದುರೆ ಸವಾರರು ಕುದುರೆಗಳನ್ನೋಡಿಸುತ್ತ ಕೋಟೆಯ ಸಮೀಪದಲ್ಲಿಯೇ ಬಂದರು. ಇದನ್ನು ದೂರಿನಿಂದ ನೋಡಿದ ಒಬ್ಬ ತೋಫು ಹಾರಿಸುವವನು, ಮದ್ದು ತುಂಬಿ ಇಟ್ಟಿರುವ ತೋಫನ್ನು ಕುದುರೆ ಸವಾರರು ಬರುವ ನಿಟ್ಟಿಗೆ ತಿರುಗಿಸಿ, ತೋಫಿಗೆ ಬೆಂಕಿ ಇಟ್ಟನು. ತೋಫಿನ ಹಾರುವಿಕೆಗೆ ಅವರು ನೆಗೆದು ಬಿದ್ದರು. ತರುವಾಯ, ಒಂದೆರಡು, ದಿನಗಳಲ್ಲಿಯೇ ತಮ್ಮ ಸೈನ್ಯ ಮತ್ತು ತೋಫುಗಳ ಸಿದ್ಧತೆ ಮಾಡಿಕೊಂಡು, ಇಂಗ್ಲೀಷರು ಒಳ್ಳೇ ಸಿಸ್ತಿನಿಂದಲೂ ಎಡೆಬಿಡದೆಯೂ ಹಗಲಿರುಳು ತೋಫಿನಿಂದ ಗುಂಡಿನಮಳೆ ಸುರಿಸಹತ್ತಿದರು. ದೊಡ್ಡ ದೊಡ್ಡ ಬೆಂಕೆಯ ಗುಂಡುಗಳು ಕೋಟೆ ಮತ್ತು ಊರ ಮೇಲೆ ಬಂದು ಬೀಳತೊಡಗಿದವು. ಒಂದೊಂದು ಗುಂಡುಗಳಿಗೆ ೮-೧೦ ಜನರು ಸತ್ತು ೧೦-೧೫ ಜನರಾದರೂ ಗಾಯ ಹೊಂದುತ್ತಿದ್ದರು. ಮನೆಗಳ ಮೇಲೆ ಬಿದ್ದರೆ, ಉರಿ ಹತ್ತಿ, ಮನೆಗಳು ಸುಟ್ಟು ಹೋಗುತ್ತಿದ್ದವು. ಈ ಮೇರೆಗೆ ಇಂಗ್ಲೀಷರ ಹಗಲು ರಾತ್ರಿ ತೋಫುಗಳ ಹೊಡೆತ ನಡೆಸಿದ್ದರಿಂದ ಊರೆಲ್ಲ ಹಾಳು ಸುರಿಯ ಹತ್ತಿತು. ಈ ಮೇರೆಗೆ ಹನ್ನೊಂದು ದಿನಗಳವರೆಗೆ ತೋಫಿನ ಹೊಡೆತ ನಡೆದಿದ್ದರೂ, ರಾಣಿಯು ಹಿಂಜರಿಯಲಿಲ್ಲ ಆದರೆ, ಹನ್ನೆರಡನೆಯ ದಿನ ಬೆಳಗ್ಗೆ ಝಾಂಸಿ ಊರ ಕೊತ್ತಳದ ಮೇಲಿರುವ ತೋಫು ಹಾರದೆ ನಿಂತು ಹೋಯಿತು. ಶತ್ರುಗಳ ಕಡೆಯ ಸಾವಿರಾರು ಜನ ಕೂಲಿಯವರು ಹುಲ್ಲಿನ ಹೊರೆಗಳನ್ನು ಹೊತ್ತು ಊರ ಕೋಟೆಯ ಮಗ್ಗಲಿಗೆ ಬರುತ್ತಿದ್ದರು. ಅವರ ಹಿಂದಿನಿಂದ ಇಂಗ್ಲೀಷರ ದಂಡಿನವರು ಬಂದು; ಆ ಹುಲ್ಲಿನವರೆಗೆ ಕೋಟೆಯ ಮಗ್ಗಲಿಗೆ ಮೆಟ್ಟಲುಗಳಂತೆ ಹುಲ್ಲಿನ ಹೊರೆಗಳನ್ನು ಒಂದರಮೇಲೊಂದಿಡಲಿಕ್ಕೆ ಹೇಳಿದರು. ಮತ್ತು ನೋಡು ನೋಡುವಷ್ಟರಲ್ಲಿ ಸಾವಿರಾರು ಜನ ದಂಡಾಳುಗಳು ಊರಿನ ದಕ್ಷಿಣ ದಿಕ್ಕಿನ ಕೋಟೆಯ ಮೇಲೇರಿ ನಿಂತರು.

# ಝಾಂಸಿಯಲ್ಲಿ ನಡೆದ ಕೊಲೆ-ಸುಲಿಗೆ.

ಇಂಗ್ಲೀಷರ ದಂಡಿನ ಸೀಪಾಯಿಗಳು ಊರ ಕೋಟೆಯ ಮೇಲೆ ಹತ್ತಿದ್ದನ್ನು ನೋಡಿದ ಕೂಡಲೇ ಲಕ್ಷ್ಮೀಬಾಯಿಯ ಮೈಯ್ಯಲ್ಲಿ ಆವೇಶ ತುಂಬಿತು. ಬಹು ದಿವಸಗಳಿಂದ ತನ್ನಲ್ಲಿದ್ದ ಒಂದುವರೆ ಸಾವಿರ ಅರಬ ಸೀಪಾಯಿಗಳನ್ನು ಕಟ್ಟಿಕೊಂಡು, ಕೋಟೆಯಿಂದ ಕೆಳಗಿಳಿದು, ಇಂಗ್ಲೀಷ ದಂಡಿನ ಜನರನ್ನು ಸರ-ಸರ ಕತ್ತಿಯಿಂದ ಸವರುತ್ತ ಮಹಾ ಚಂಡಿಯಂತೆ ಧಂಡಿನಲ್ಲಿ ಹೊಕ್ಕಳು. ಆ ಹೊಡೆತಕ್ಕೆ ನೂರಾರು ಜನರನ್ನು ದಿಗ್‌ಬಲಿ ಯಿಕ್ಕಿದಳು. ಇದರಿಂದ ಹೆದರಿದ ಇಂಗ್ಲೀಷ ದಂಡಿನವರು ತೋಪು ಮತ್ತು ಬಂದೂಕುಗಳನ್ನು ಹಾರಿಸ ತೊಡಗಿದರು. ಆಗ ರಾಣಿಯ ಬದಿಯಲ್ಲಿಯೇ ಇದ್ದು ಕಾದುತ್ತಿರುವ ಒಬ್ಬ ಹಳೆಯ ಸರದಾರನು ತಿರುಗಿ ಕೋಟೆಯ ಕಡೆಗೆ ಹೋಗಲು ರಾಣಿಗೆ ಬಿನ್ನವಿಸಿದನು. ಅಷ್ಟರಲ್ಲಿ, ಇಂಗ್ಲೀಷ ದಂಡಿನವರು ನಾಲ್ಕೂ ಹೆಬ್ಬಾಗಿಲಿನಿಂದ ಒಳನುಗ್ಗಿ ಕೈಗೆ ಸಿಕ್ಕ ಜನರನ್ನು ಕತ್ತಿಯಿಂದಲೂ, ಬಂದೂಕಿನಿಂದಲೂ, ಕೊಲ್ಲುತ್ತ ಒಂದೆಡೆಯಲ್ಲಿ ಊರಿಗೆ ಬೆಂಕಿ ಹಚ್ಚಿದರು. ಆ ಕಾಲಕ್ಕೆ ಊರಲ್ಲಿದ್ದ ಗೊಂದಲ ಮತ್ತು ಗೋಳಾಟವನ್ನು ಹೇಳತೀರದು ಕುರಿಗಳ ದಡ್ಡಿಯಲ್ಲಿ ತೋಳಗಳ ಹಿಂಡು ಹೊಕ್ಕಂತಾಯಿತು. ಜನರು ಜೀವ ಉಳಿಸಿಕೊಳ್ಳಲಿಕ್ಕೆ ಸಿಕ್ಕ ಕಡೆಗೆ ಓಡ ಹತ್ತಿದರು. ಮನೆ-ಮನೆಗಳಲ್ಲಿ ಹೊಕ್ಕು ದಂಡಿನವರು ಅವರಲ್ಲಿದ್ದ ದುಡ್ಡು-ದುಗ್ಗಾಣಿಯನ್ನೆಲ್ಲ ಸುಲಿದರು. ಹಣ ಕೊಡದವರನ್ನು ಅವರ ಧೋತರಗಳಿಂದ ಕುತ್ತಿಗೆಗೆ ಉರ್ಲುಹಾಕಿ, ಬೀದಿ ಗೆಳಕೊಂಡು ತಂದು, ಮನ ಬಂದಂತೆ ಹೊಡೆದರು, ಬಡೆದರು; ಈ ಸುಲಿಗೆ ಯಲ್ಲಿ ಕೋಟ್ಯವಧಿ ರೂಪಾಯಿಗಳ ಮುತ್ತು-ರತ್ನ-ವಜ್ರ-ಬಂಗಾರ-ಬೆಳ್ಳಿಯ ಒಡವೆಗಳು ದಂಡಿನವರ ಕೈ ಸೇರಿದವು. ಮರುದಿವಸ ಅವರು ಅರಮನೆ ಯನ್ನು ಹೊಕ್ಕು, ಅಲ್ಲಿರುವ ಬೆಲೆಯುಳ್ಳ ಸಾಮಾನುಗಳನ್ನೆಲ್ಲ ಒಯ್ದರು. ಅಲ್ಲಿದ್ದ ಪುರಾತನ ಗ್ರಂಥ ಭಾಂಡಾರವನ್ನವರು ಅಂತಸ್ತಿನ ಮೇಲೆ ನಿಂತು ಕೊಂಡೇ ತೂರಿಬಿಟ್ಟರು. ಇದರಿಂದ ಓಲೆಗಳು ಊರೊಳಗಿನ ಬೀದಿಗಳಲ್ಲೆಲ್ಲ ಹಾರ್‍ಯಾಡುತ್ತಿದ್ದವು. ಹೆಣಗಳ ರಾಸಿಯು ಅಲ್ಲಲ್ಲಿ ಬಿದ್ದು, ಊರು ಹೊಲಸು ನಾರುತ್ತಿತ್ತು. ಝಾಂಸಿಯ ಪಟ್ಟಣವು ಸ್ಮಶಾನವಾಯಿತು.

## ರಾಣಿಯು ರಣಕ್ಕೆ ಹೊರಟಳು.

ತನ್ನ ಜೀವಕ್ಕಿಂತಲೂ ಪ್ರೀಯವಾಗಿರುವ ಝಾಂಸಿಯ ದುರ್ದೆಸೆಯನ್ನು ಕಂಡು ಲಕ್ಷ್ಮೀಬಾಯಿಗೆ ದುಃಖ ತುಂಬಿ ಬಂದಿತು. ಅದನ್ನು ಬಿಗಿಹಿಡಿಯಲಿಕ್ಕಾಗದೆ, ಆಕೆ ನೇರವಾಗಿ ಕೋಟೆಯಲ್ಲಿರುವ ಅರಮನೆಗೆ ಬಂದು, ಉದ್ವಿಗ್ನಳಾಗಿ ಕುಳಿತಳು. ಆಕೆಯ ಕಣ್ಣುಗಳಾಗ ಅಂಚುವುಟಿ ನೀರಿನಿಂದ ತುಂಬಿದ್ದವು. ಮುಖವು ಕೆಂಪೇರಿ, ಮನಸ್ಸು ಕ್ಷುಬ್ಧವಾಗಿತ್ತು. ಅಷ್ಟರಲ್ಲಿ ಒಬ್ಬ ಸರದಾರನು ಓಡಿ ಬಂದು, ತೋಫಖಾನೆಯ ಮುಖ್ಯಸ್ಥನಾದ ಗುಲಾಮ ಗೌಸಖಾನನು ಇಂಗ್ಲೀಷರ ಗುಂಡಿಗೆ ತುತ್ತಾದನು, 'ಕೋಟೆ ಬಾಗಿಲನ್ನು ಕಾಯುತ್ತಿರುವ ವೀರ ಸರದಾರನು ಮಡಿದನು' ಎಂಬ ಸುದ್ದಿಯನ್ನು ಹೇಳಿದನು. ಅದಕ್ಕೆ ರಾಣಿಯು "ಆಗಲಿ ಇನ್ನೇನು? ನನ್ನ ಕೋಟೆಯ ಸಂಗಡ ನನ್ನೀ ಶರೀರವನ್ನು ಚಂಡಾಡಲು ನಿಶ್ಚಯಿಸಿರುವೆ. ಇನ್ನೇಕೆ ಆ ಮಾತು? ನನ್ನೊಡನೆ ನನ್ನ ನಿಶಾನೆಯೊಂದಿದ್ದರೆ ಆಯಿತು? ಎಲ್ಲಿ ಬಿದ್ದರೂ ಅಷ್ಟೇ!" ಹೀಗೆಂದು ಸುಮ್ಮನಾದಳು. ಆಗ ಹಳೆಯ ಕಾಲದ ಒಬ್ಬ ಸರದಾರನು ಬಂದು ನಮಸ್ಕಾರಮಾಡಿ "ಅವ್ವನವರೆ, ತಾವಿನ್ನು ಇಲ್ಲಿರುವದು ಕ್ಷೇಮಕರವಲ್ಲ ಹೇಗಾದರೂ ಮಾಡಿ ಶತ್ರುಗಳ ಈ ಭೀಕರವಾದ ಗೊಂದಲದಿಂದ ಪಾರಾಗಿ ಪೇಶವೆಯರನ್ನು ಕೂಡಿಕೊಳ್ಳಲೇಬೇಕು. ಒಂದು ವೇಳೆ ದಾರಿಯಲ್ಲಿಯೇ ಸಾವು ಒದಗಿದರೆ ಗಂಗೆಯು ತನ್ನ ಹೊಟ್ಟೆಯಲ್ಲಿ ತೆಗೆದು ಕೊಳ್ಳಲು ಸಿದ್ಧಳಿರುವಳು" ಎಂದಾಗ ರಾಣಿಯು ಗಂಭೀರ ಮುದ್ರೆಯಿಂದ, "ನಾನೇನೋ ರಣದಲ್ಲಿಯೇ ಮಡಿಯಲು ಮನಸ್ಸು ಗಟ್ಟಿಮಾಡಿರುವೆ; ಆದರೆ, ಎಷ್ಟೆಂದರೂ ನಾನು ಹೆಂಗಸು. ನನ್ನ ದೇಹ ಶತ್ರುಗಳ ಕೈಗೆ ಸೇರಕೂಡದು ಎಂಬುದೇ ನನ್ನ ಹಾರೈಕೆ" ಹೀಗೆಂದಾಗ, ಅಲ್ಲಿ ನಿಂತಿರುವ ಕೆಲ ಜನ ಸರದಾರರು "ನಮ್ಮ ದೇಹದಲ್ಲಿ ಪ್ರಾಣವಿರುವವರೆಗೆ ನಾವು ನಿಮ್ಮ ದೇಹವನ್ನು ಶತ್ರುಗಳು ಮುಟ್ಟದಂತೆ ಕಾಪಾಡುವೆವು. ಇದು ಖಂಡಿತ" ಎಂದು ಆಣೆಯಿಟ್ಟುಕೊಂಡರು.

ಅಂದು ಅಮವಾಸ್ಯೆ "ಇನ್ನು ಶತ್ರುಗಳ ಕೈಗೆ ಸಿಗದಂತೆ ಪಾರಾಗ್ಗುವದೇ ಒಳಿತು" ಹೀಗೆಂದು ರಾತ್ರಿ ಎಲ್ಲರೂ ಹನ್ನೆರಡು ಘಂಟೆಯಲ್ಲಿಯೇ

ಹೊರಡಲು ನಿಶ್ಚಯಿಸಿದರು. "ಪ್ರೀತಿಯ ಝಾಂಸಿಯನ್ನು ತೊಲಗಿ ಹೋಗುವ ಸಮಯ ಬಂತಲ್ಲಾ" ಎಂದು ಎಲ್ಲರೂ ಕಣ್ಣೀರಿಟ್ಟರು. ಲಕ್ಷ್ಮೀಬಾಯಿಯು ಶುಭ್ರವಾದ ನಿಲುವಂಗಿ, ಚಣ್ಣ ತೊಟ್ಟು, ತಲೆಗೆ ಪೇಟಾ ಸುತ್ತಿಕೊಂಡು, ಮೈಯಲ್ಲಿ ಉಕ್ಕಿನ ಅಂಗಿಯನ್ನು ಹಾಕಿಕೊಂಡಳು. ಸೊಂಟಕ್ಕೆ ಸಣ್ಣ ಕತ್ತಿ ಮುಂತಾದ ಹತ್ಯಾರಗಳನ್ನಿಕ್ಕಿದಳು. ದಾಮೋದರ ಎಂಬ ತನ್ನ ಮಗನನ್ನು ಟೊಂಕಕ್ಕೆ ಬಿಗಿಯಾಗಿ ಕಟ್ಟಿಕೊಂಡಳು. ಆಕೆಯನ್ನು ಹಿಂಬಾಲಿಸಲಿಕ್ಕೆ ಇನ್ನೂರು ಜನ ಸವಾರರು, ೧೨೦೦ ರಷ್ಟು ಅರಬ ವೀರರು ಸಜ್ಜಾಗಿದ್ದರು. ಲಕ್ಷ್ಮೀಬಾಯಿಯು ಎರಡುವರೆ ಸಾವಿರ ರೂಪಾಯಿ ಬೆಲೆಯ ಬಿಳಿಯ ಕುದುರೆಯನ್ನೇರಿ, "ಹರಹರ ಮಹಾದೇವ" ಎಂದು ದೇವರನ್ನು ಸ್ಮರಿಸಿ, ಎಲ್ಲರೊಡನೆ ಕೋಟೆಯನ್ನಿಳಿದು, ಊರೊಳಗಿನ ಉತ್ತರ ಬಾಗಿಲಿಂದ ಹೊರ ಬಿದ್ದರು. ಆ ಬಾಗಿಲವನ್ನು ಕಾಯುತ್ತಿರುವ ಕಾವಲಿಗನು ಯಾರವರು ಎಂದು ಕೇಳಿದಾಗ "ತೇಹರಿಯ ದಂಡಿನವರು. ಸರ ಹ್ಯುರೋಜರ ಸಹಾಯಕ್ಕೆ ಹೋಗುತ್ತಿರುವರು. ಎಂದು ಹಾರಿಕೆಯ ಉತ್ತರ ಹೇಳುತ್ತ ಮುನ್ನಡೆದರು. ಆದರೆ ಇಂಗ್ಲೀಷರ ದಂಡಿನವರಿಗೆ ಸಂಶಯ. ಕೆಲವರು ಅವರನ್ನು ಬೆನ್ನಟ್ಟಿದರು. ಆದರೆ ರಾಣಿಯು ತನ್ನ ಸರದಾರರೊಡನೆ ಅವರ ಮೇಲೆ ಬಂದೂಕುಗಳನ್ನು ಹಾರಿಸುತ್ತಲೇ ವೇಗದಿಂದ ಕುದುರೆಗಳನ್ನು ಓಡಿಸಿದಳು. ನೋಡು ನೋಡುವಷ್ಟರಲ್ಲಿ ಅವರೆಲ್ಲರೂ ಇಂಗ್ಲೀಷರ ದಂಡಿನ ಹೊರಗೆ ಬಂದರು. ರಾಣಿಯ ಹಿಂದೆಯೇ ಒಬ್ಬ ದಾಸಿಯು ಮತ್ತು ಒಂದು ಆಳು ಇದ್ದು, ಅವರೂ ಕುದುರೆಯನ್ನೇರಿದ್ದರು. ಹೀಗೆ ಅವರು ತಮ್ಮ ಕುದುರೆಗಳನ್ನೋಡಿಸುತ್ತಲೇ ನಡೆದರು. ರಾತ್ರಿಯ ಸಮಯವಿದ್ದುದರಿಂದ ಅವರನ್ನು ಬೆನ್ನಟ್ಟಿದ್ದ ಸವಾರರು ನಿರಾಶರಾಗಿ ಹಿಂದುಳಿದರು. ಮರುದಿನ ಅವರೆಲ್ಲರೂ ರಾತ್ರಿ ಹನ್ನೆರಡು ಗಂಟೆಗೆ ಕಾಲ್ಪಿಯನ್ನು ಸೇರಿದರು. ಅನ್ನ-ನೀರಿನ ಪರವೆ ಇಲ್ಲದೆ, ಮಗುವನ್ನು ಟೊಂಕಕ್ಕೆ ಕಟ್ಟಿಕೊಂಡು ೨೪ ತಾಸುಗಳವರೆಗೆ ಇನ್ನೂರ ಮೈಲು ದಾರಿ ಕುದುರೆಯನ್ನು ಹೊಡೆದ ಆ ವೀರ ಮಹಿಳೆಯ ಯೋಗ್ಯತೆಯನ್ನು ಎಷ್ಟೆಂತು ಬಣ್ಣಿಸಬೇಕೋ ತಿಳಿಯದು.

## ಕಾಲ್ಪಿಯಲ್ಲಿ

ಅಲ್ಲಿ, ತಾತ್ಯಾಟೋಪಿ, ರಾವಸಾಹೇಬ ಪೇಶವೆ ಮೊದಲಾದವರಿದ್ದರು. ಒಮ್ಮಿಂದೊಮ್ಮೆ ಲಕ್ಷ್ಮೀಬಾಯಿಯು ತನ್ನ ಜನರೊಡನೆ ಬಂದುದನ್ನು ಕಂಡು ಅವರೆಲ್ಲರಿಗೆ ಅತ್ಯಾನಂದವಾಯಿತು ಎಲ್ಲರೂ ಕೂಡಿ ಮುಂದಿನ ಕಾಳಗದ ಸಿದ್ಧತೆಗೆ ಅಣಿಯಾದರು. ಆಗ ರಾಣಿಯು "ನಾವು ಇಲ್ಲಿರುವದಕ್ಕಿಂತ ಯಾವುದೊಂದು ಸುಭದ್ರವಾದ ಕೋಟೆಯನ್ನೇ ಆಶ್ರಯಿಸಿರುವದು ವಿಹಿತ ವೆಂದು ಗ್ವಾಲ್ಹೇರ ಕೋಟೆಯನ್ನು ಸೂಚಿಸಿದಳು. ಮೇಲಾಗಿ, ಗ್ವಾಲ್ಹೇರ ಕೋಟೆಯು ಸಿಂಧೆಸ ವಶದಲ್ಲಿ, ಅವನು ಅಲ್ಲಿರುವದರಿಂದ, ಸ್ವತಃ ಪೇಶವೆ ರಾವಸಾಹೇಬನನ್ನು ಕಂಡರೆ, ನಮಗೆ ಬೆಂಬಲ ಕೊಡದೆ ಇರಲಾರನು. ಅಲ್ಲಿಗೆ ಹೋದ ಮೇಲೆ, ನಮಗೆ ಅವಶ್ಯ ಕಂಡರೆ, ಹೋಳಕರ ಪವಾರ ಮುಂತಾದ ಸಂಸ್ಥಾನಿಕರ ಸಹಾಯವನ್ನು ಪಡೆಯ ಬಹುದು" ಎಂದು ಮುಂತಾಗಿ ನುಡಿದಳು. ಎಲ್ಲರಿಗೂ ಲಕ್ಷ್ಮೀಬಾಯಿಯ ಮಾತು ಸೂಕ್ತ ವೆಂದು ತೋಚಿತು. ಅದರಂತೆ ಗ್ವಾಲ್ಹೇರಕ್ಕೆ ನಡೆದರು; ಆದರೆ ಸಿಂಧೆ ಅವ ರಿಗೆ ಸ್ವಾಗತವೀಯದೆ, ತಿರಸ್ಕರಿಸಿದನು. ಈ ಮೊದಲೇ ಗ್ವಾಲ್ಹೇರದಲ್ಲಿಯ ಸೈನಿಕರು ಕ್ರಾಂತಿಕಾರಕರಿಗೆ ಅನುಕೂಲವಾಗಿದ್ದರಿಂದ, ಅವರೆಲ್ಲರ ಮುಂದೆ, ಸಿಂಧೆನ ಮಾತು ನಡೆಯಲಿಲ್ಲ. ಗ್ವಾಲ್ಹೇರ ಕೋಟೆಯು ಕ್ರಾಂತಿಕಾರಕರ ಕೈ ಸೇರಿತು. ಈ ಕಾರ್ಯದೊಳಗೆ ರಾಣಿಯು ಚನ್ನಾಗಿಯೇ ತನ್ನ ಕೈಯನ್ನು ತೋರಿಸಿದಳೆನ್ನಬಹುದು. ಇದು ಗ್ವಾಲ್ಹೇರದ ಅರಸನಿಗೆ ಸಹನೆಯಾಗದ್ದ ರಿಂದ, ತನ್ನ ದಿವಾಣನನ್ನು ಕಟ್ಟಿಕೊಂಡು, ಆಗ್ರಾಕ್ಕೆ ಓಡಿದನು.

## ಗ್ವಾಲ್ಹೇರದ ಯುದ್ಧ

ಗ್ವಾಲ್ಹೇರವು ತಮ್ಮ ಕೈಸೇರಿದ ಬಳಿಕ, ತಾತ್ಯಾಟೋಪಿ ಮೊದಲಾದ ವರು ರಾವಸಾಹೇಬ ಪೇಶವೆಯನ್ನು ಪಟ್ಟಗಟ್ಟಿ ಕೆಲವು ದಿನ ಎಲ್ಲರೂ ಆನಂದ ದಲ್ಲಿ ಕಾಲ ಕಳೆದರು. ಆಗ ಕೂಡ ಕ್ರಾಂತಿಕಾರಕರ ಬುದ್ಧಿ ಆಗಿನ ಮಟ್ಟಿಗೆ ಮಸಣಿಸಿತೆಂದೇ ಹೇಳಬಹುದು. ಅಷ್ಟರೊಳಗಾಗಿ, ಗ್ವಾಲ್ಹೇರದ ಸಿಂಧೆ

ಜಯಾಜೀರಾಯನು ಇಂಗ್ಲೀಷರ ಸೈನ್ಯದೊಡನೆ ಬಂದನು. ಸರ ಹ್ಯುರೋಜ ಎಂಬ ದಳವಾಯಿಯು ಆ ಸೈನ್ಯಕ್ಕೆ ಸೇನಾಪತಿ. ಎರಡೂ ಪಕ್ಷದವರು ತಮ್ಮ ತಮ್ಮ ಸೈನ್ಯದ ಸಿದ್ಧತೆ ಮಾಡಿಕೊಂಡರು. ತಾತ್ಯಾಟೋಪಿ, ಲಕ್ಷ್ಮೀಬಾಯಿ ಇವರೆಲ್ಲರೂ ಒಂದೊಂದು ದಂಡಿನ ಗುಂಪಿಗೆ ನಾಯಕರಾಗಿ ನಿಂತಿದ್ದರು. ದಿನ್ನೆ-ದಿಬ್ಬೆಗಳ ಮೇಲೆ ತಮ್ಮ ತಮ್ಮ ಅನಕೂಲ ನೋಡಿಕೊಂಡು, ತೋಫು ಗಳನ್ನಿಟ್ಟಿದ್ದರು. ಲಕ್ಷ್ಮೀಬಾಯಿಯು ವೀರರ ವೇಷದಿಂದಲೇ ತನ್ನ ಸೈನಿಕರಿಗೆ ಯುದ್ಧದ ವಿಚಾರದಲ್ಲಿ ಹಲವು ಸೂಚನೆಗಳನ್ನು ಕೊಡುತ್ತ ಇದ್ದಳು. ಯುದ್ಧದ ಮೊದಲನೆಯ ದಿವಸ ಕ್ರಾಂತಿಕಾರಕರು ಬಹು ಈರ್ಷೆಯಿಂದ ಹೋರಾಡಿದ್ದರಿಂದ, ಅಂದು ಇಂಗ್ಲೀಷ ಸೈನಿಕರು ಹಣ್ಣಾದರೆನ್ನಬಹುದು. ಅಷ್ಟರಲ್ಲಿ ಇಂಗ್ಲೀಷ ಸೈನಿಕರ ಬೆಂಬಲಕ್ಕೆ ಮತ್ತೆ ಹೊಸ ಹುರುಪಿನ ಮೂರು ನಾಲ್ಕು ದಂಡಿನ ಗುಂಪುಗಳು ಬಂದವು. ಅವರು ರಾವಸಾಹೇಬ ಪೇಶವೆ ಮತ್ತು ತಾತ್ಯಾ ಟೋಪಿಯ ಸೈನ್ಯದ ಮೇಲೆ ಹಲ್ಲೆ ನಡೆಸಿ, ಅವರನ್ನು ಸೋಲಿಸಿದರು. ಈ ಸುದ್ದಿಯು ಗೊತ್ತಾದ ಕೂಡಲೇ ರಾಣಿಯ ಕೈಕೆಳಗೆ ಹೋರಾಡುತ್ತಿರುವ ದಂಡಿನವರು ಕೈಕಾಲು ಕಳೆದು ಕೊಂಡು ಓಡತೊಡ ಗಿದರು. ಈ ಹೊತ್ತಿಗೆ ರಾಣಿಯು ಇಂಗ್ಲೀಷ ಸೈನ್ಯದೊಳಗೆ ಸಿಕ್ಕಿಕೊಂಡಿದ್ದಳು. "ಇನ್ನು, ಇಲ್ಲಿದ್ದು ಉಪಯೋಗವಿಲ್ಲ" ವೆಂದು ಸೈನ್ಯದ ದಟ್ಟಣೆಯೊಳಗಿಂದ ಹೊರಬಿದ್ದು ತನ್ನ ಕುದುರೆಯನ್ನು ಓಡಿಸಿದಳು. ಆಗ, ಕೆಲವು ಜನ ಸೈನಿ ಕರು ಹಾಗೆಯೇ ಆಕೆಯ ಬೆನ್ನಟ್ಟಿ, ಸುಂದರ ಎಂಬ ರಾಣಿಯ ದಾಸಿಯನ್ನು ಹೊಡೆದು ಕೆಳಗೆ ಕೆಡವಿದರು ಆಕೆ ಚೀರಿಕೊಂಡು ಕೆಳಗೆ ಬಿದ್ದಳು. ಆಕೆಯ ಚೀರುವಿಕೆಯನ್ನು ಕೇಳಿ ಮುಂದಿದ್ದ ರಾಣಿಯು ಹಿಂತಿರುಗಿ, ರೌಸಿನಿಂದ ಅವರ ಮೇಲೇರಿ ಹೋಗಿ, ತನ್ನ ಕತ್ತಿಯಿಂದ ಹೊಡೆದಳು. ಆ ಹೊಡೆತಕ್ಕೆ ಅವನು ಸತ್ತು ನೆಲಕ್ಕುರುಳಿದನು. ಹಿಂದೆ ಸಿಪಾಯರು ಬೆನ್ನಟ್ಟಿದ್ದರಿಂದ ನಿಲ್ಲಲಿಕ್ಕೆ ಅವಕಾಶವೇ ಇರಲಿಲ್ಲ. ಅದರಿಂದ ರಾಣಿಯು ತನ್ನ ಕುದುರೆ ಯನ್ನು ನಾಗಾ ಲೋಟದಿಂದ ಓಡಿಸುತ್ತಿರುವಾಗ, ದಾರಿಯಲ್ಲಿ ಹಳ್ಳ ಅಡ್ಡ ಬಂದಿತು. ಹಳ್ಳದಲ್ಲಿ ನೀರು ತುಂಬಿ ಹರಿಯುತ್ತಿದ್ದುದರಿಂದ, ಕುದು ರೆಯು ನೀರು ನೋಡಿ ಬೆದರಿ, ಹಿಂಗಾಲ ಹಾಕಹತ್ತಿತು. ಎಷ್ಟು ಹೊಡೆ

ದರೂಮುಂದೆ ನಡೆಯದಾಯಿತು. ಗಾಬರಿಯಾಗಿ ಅತ್ತಿತ್ತ ನೋಡ ಹತ್ತಿದಳು.

## ರಾಣಿಯ ಮರಣ

ಅಷ್ಟರಲ್ಲಿ ಲಕ್ಷ್ಮೀಬಾಯಿಯನ್ನು ಅಟ್ಟಿಸಿಕೊಂಡು ಬಂದ ಇಬ್ಬರು ಇಂಗ್ಲೀಷ ಸೀಪಾಯರು ಕುದುರೆ ಓಡಿಸುತ್ತ ಹತ್ತಿರವೇ ಬಂದರು. ರಾಣಿಗೂ ಅವರಿಗೂ ಕೈ ಕೈ ಹತ್ತಿತು. ಅವರಿಬ್ಬರು, ರಾಣಿಯು ಒಬ್ಬಳೇ. ಈ ಸ್ಥಿತಿಯಲ್ಲಿ ಒಬ್ಬ ಸವಾರನು ರಾಣಿಯ ಮೇಲೆ ಗುಂಡು ಹಾರಿಸಿದನು, ಇನ್ನೊಬ್ಬನು ಕತ್ತಿಯಿಂದ ಏಟು ಹಾಕಿದನು. ರಾಣಿಗೆ ಬಹಳ ಪೆಟ್ಟು ತಾಕಿ, ಆಕೆ ಕುದುರೆಯ ಮೇಲಿಂದ ಕೆಳಗೆ ಬಿದ್ದಳು. ರಾಣಿಯು ಸತ್ತಳೆಂದು ತಿಳಿದು ಅವರು ಮರಳಿ ಹೋದರು. ಆಕೆಯ ಬಳಿಯಲ್ಲಿದ್ದ ದೇಶಮುಖ ರಾಮಚಂದ್ರರಾಯನು ರಾಣಿಯನ್ನೆತ್ತಿಕೊಂಡು ಸಮೀಪದಲ್ಲಿರುವ ಗಂಗಾದಾಸ ಬಾವಾನ ಗುಡಿಸಲಕ್ಕೆ ಒಯ್ದು, ಶಕ್ಯವಿದ್ದಷ್ಟು ಆರೈಕೆ ಮಾಡಿದನು. ಆದರೆ, ವ್ಯರ್ಥವಾಯಿತು ಸಾಯುವಾಗ ರಾಣಿಯು "ತನ್ನದೇಹವು ಇಂಗ್ಲೀಷರ ಕೈ ಸೇರದಂತೆ ನೋಡಿಕೊಳ್ಳಿರಿ" ಎಂದು ಹೇಳಿ ಪ್ರಾಣಬಿಟ್ಟಳು. ರಾಮಚಂದ್ರರಾಯನು ಅತ್ಯಂತ ನಂಬಿಗೆಯ ಸೇವಕ. ಅವನು ಅಡವಿಯಲ್ಲಿದ್ದ ಕಂಟಿ, ಕಟ್ಟಿಗೆ ಮುಂತಾದವುಗಳನ್ನು ಕೂಡು ಹಾಕಿ, ರಾಣಿಯ ದೇಹಕ್ಕೆ ಅಗ್ನಿ ಸಂಸ್ಕಾರ ಮಾಡಿದನು.

ಈ ರೀತಿಯಾಗಿ, ಲಕ್ಷ್ಮೀಬಾಯಿಯ ದಿವ್ಯ ಮತ್ತು ವೀರ ಜೀವನವು ತೇಜಃ ಪುಂಜವಾಗಿ ಮೆರೆದು, ರಣ ಕ್ಷೇತ್ರದಲ್ಲಿ ಮಾಯವಾಯಿತು. ಬರಿಯ ಝಾಂಸಿಯ ಲಕ್ಷ್ಮಿಯೇ ಮಾಯವಾಗದೆ, ಭಾರತದ ಲಕ್ಷ್ಮಿಯೇ ಅಂದಿಗೆ ಭಾರತವನ್ನು ತೊಲಗಿದಳೆನ್ನಬಹುದು. ಇಡೀ ಭಾರತವೆಲ್ಲವೂ ಮಲಗಿರುವಾಗ ಈ ಮಹಿಳೆಯು ತನ್ನ ನಾಡಿನ ಸ್ವಾತಂತ್ರ್ಯಕ್ಕಾಗಿ ಕೆಲವು ಜನ ವೀರರೊಡನೆ ಸರಿಸಮಳಾಗಿ, ಹೋರಾಡಿ ತೋರಿದ ಪರಾಕ್ರಮವನ್ನು ಭಾರತವು ಎಂದೂ ಮರೆಯದು. ನೂರು ವರ್ಷಗಳು ಉರುಳಿ ಹೋದರೂ, ಆ ಮಹಿ

ಳೆಯ ಜೀವನವು ಅಮರವಾಗಿದೆ. ವೀರರಿಗೆ ಸ್ಫೂರ್ತಿಯನ್ನುಂಟು ಮಾಡುತ್ತಿದೆ. ಅದರ ಫಲವೇ ಇಂದಿನ ಸ್ವಾತಂತ್ರ್ಯ. ಇಂದು ದೊರಕಿರುವ ಸ್ವಾತಂತ್ರ್ಯವನ್ನು ಕಳೆದು ಕೊಳ್ಳದೆ, ಇನ್ನೆಂದೂ ಭಾರತವು ಪರರಾಯರ ಕೈಗೆ ಸಿಲುಕದಂತೆ ಸ್ವತಂತ್ರ ಜೀವಿಗಳಾಗಲು, ನಾವೆಲ್ಲ ಒಗ್ಗಟ್ಟಿನಿಂದ ಯತ್ನಿಸುವಾ!



# ದಕ್ಷಿಣದಲ್ಲಿಯ ಪರಿಸ್ಥಿತಿ.

ಆ ಕಾಲಕ್ಕೆ ದಕ್ಷಿಣದಲ್ಲಿಯೂ ಅಂದರೆ ಮುಂಬೈ–ಪುಣೆಗಳಲ್ಲಿ ಸೀಪಾಯರು ಗುಪ್ತ ಕಟ್ಟುಗಳನ್ನು ಮಾಡಿಕೊಂಡು ದೊಂಬಿ ಎಬ್ಬಿಸುವದರಲ್ಲಿದ್ದರು. ಆದರೆ, ಅಷ್ಟರಲ್ಲಿ ಇಂಗ್ಲೀಷರು ಎಚ್ಚರಾಗಿ, ಗುಪ್ತವೇಷದಿಂದ ಗುಪ್ತ ಚಾರರನ್ನು ಕಳಿಸಿ ಮುಖ್ಯ ನಾಯಕರಿಗೆ ಶೀಕ್ಷೆ ವಿಧಿಸಿದ್ದರಿಂದ ಅಷ್ಟಕ್ಕೆ ಅದು ನಿಂತು ಹೋಯಿತು.

## ಸುರುಪುರ ಅರಸನ ತ್ಯಾಗ.

ಹೈದರಾಬಾದ ಸಂಸ್ಥಾನದಲ್ಲಿದ್ದ ಡಂಗೆಯನ್ನು ಬಹುಮಟ್ಟಿಗೆ ಸ್ವಾಮಿನಿಷ್ಠನಾದ ನಿಜಾಮನು ತನ್ನ ಮಂತ್ರಿ ಸಾಲಾರಜಂಗನ ಬೆಂಬಲದಿಂದ ಮುರಿದೊತ್ತಿದರೂ, ಸುರುಪುರದ ಯುವಕ ಹಿಂದೂ ರಾಜನು ಮಾತ್ರ ಆ ಸ್ವಾತಂತ್ರ್ಯ ಯುದ್ಧದಲ್ಲಿ ತನ್ನ ಸಂಸ್ಥಾನವನ್ನೇ ಬಲಿಕೊಡಲಿಕ್ಕೆ ಸಿದ್ಧನಾದನು. ಇವನು ಮೊದಲು ತನ್ನೊಬ್ಬನ ಧೈರ್ಯದಿಂದಲೇ ಅರಬ, ರೋಹಿಲೆ ಮತ್ತು ಪಠಾಣರ ದಂಡನ್ನು ಕೂಡ ಹಾಕಹತ್ತಿದನು. ಈ ಕಾರ್ಯಕ್ಕೆ ಅವನನ್ನು ನಾನಾ ಸಾಹೇಬನ ಕ್ರಾಂತಿಕಾರಕ ದೂತರು ಬಲುಮಟ್ಟಿಗೆ ಪ್ರೇರೆಪಿಸಿದರೆನ್ನಬಹುದು, ಮೇಲಾಗಿ ರಾಯಚೂರು ಹಾಗೂ ಅರ್ಕಾಟದ ಬ್ರಾಹ್ಮಣರು ಮತ್ತು ಮೌಲ್ವಿಗಳು ಇವನಿಗೆ ಧೈರ್ಯ ಕೊಟ್ಟರು. ಆದರೆ, ಅವನೀ ಎದೆಗಾರಿಕೆಯು ಬಹು ದಿವಸ ಬಾಳಲಿಲ್ಲ. ಇಂಗ್ಲೀಷರು ಮತ್ತು ನಿಜಾಮನು ಕೂಡಿ ಅವನ ಮೇಲೆ ಏರಿ ಹೋದಾಕ್ಷಣವೇ ಅವನು ಹೆದರಿ ಹೈದರಾಬಾದಕ್ಕೆ ಓಡಿದನು. ತರುವಾಯ ಒಂದು ದಿನ ಅವನು ಪೇಟೆಯಲ್ಲಿ ಅಡ್ಡಾಡುತ್ತಿರಲು ಸಾಲಾರ ಜಂಗನ ಸೀಪಾಯರು ಅವನನ್ನು ಸೆರೆ ಹಿಡಿದು, ಬ್ರಿಟಿಶರಿಗೆ ಒಪ್ಪಿಸಿದರು. ಬ್ರಿಟಿಶರು ಅವನಿಗೆ ಗಲ್ಲಿಗೇರಿಸುವವರಿದ್ದರು; ಆದರೆ, ಮೆಡೋಜ ಟೇಲರ ಎಂಬ ಒಬ್ಬ ಇಂಗ್ಲೀಷ ಅಧಿ

ಕಾರಿಯು ಕೆಲವು ದಿವಸ ಸುರುಪುರ ಸಂಸ್ಥಾನದ ಆಡಳಿತ ನೋಡು ತ್ತಿರುವಾಗ ಸುರುಪುರದ ರಾಜನು ಚಿಕ್ಕವನಿದ್ದು, ಟೇಲರನಿಗೆ 'ಅಪ್ಪಾ' ಎನ್ನುತ್ತಿದ್ದನು. ತನ್ನ ಮೇಲೆ ಈ ಬಗೆಯ ಸಂಕಟ ಬಂದಿರುವಾಗ ಸುರು ಪುರದ ರಾಜನು ಟೇಲರನನ್ನು ಕಂಡು ಆಡ್ರಾಸಿ ಓಡಿ ಬಂದು ಹೊಟ್ಟೆಯ ಮಗನಂತೆ ಅಪ್ಪಿಕೊಂಡನು. ನಿಜಸ್ಥಿತಿಯನ್ನು ಗುಟ್ಟಾಗಿಡದೆ, ಬಿಚ್ಚಿ ಹೇಳಿದರೆ ಕ್ಷಮೆ ತೋರಿಸಲು ಯತ್ನಿಸುವೆನೆಂದನು. ಆದಕ್ಕೆ ಸುರುಪುರದ ರಾಜನು "ಅಪ್ಪಾ! ಏನು ಹೇಳಿದರೂ ಹೇಳೇನು! ಈ ಕಟ್ಟಿನಲ್ಲಿ ನನ್ನನ್ನು ಪ್ರೇರೆ ಪಿಸಿದವರ ಹೆಸರುಗಳನ್ನು ಮಾತ್ರ ಒಡೆಯಲಾರೆ ನನ್ನ ಮೇಲೆ ಸಂಕಟ ಬಂತೆಂದು ನನ್ನದೇಶ ಬಂಧುಗಳನ್ನು ಕೊಂದ ದೇಶದ್ರೋಹ ಕಟ್ಟಿಕೊಳ್ಳಬೇಕೆ? ನನ್ನ ಮಟ್ಟಿಗೆ, ಈ ಬಗೆಯ ದೇಶದ್ರೋಹ ಬಗೆಯುವದಕ್ಕಿಂತಲೂ ಗಲ್ಲಿಗೆ ತಲೆಕೊಡುವದೇ ಶ್ರೇಯಸ್ಕರ" ಎಂದನು. ಅವನೀ ಕಳವಳವನ್ನು ಕಂಡು ಮೆಡೋಜ ಟೇಲರನು, ಆವನಪೇಕ್ಷೆಯಂತೆಯೇ, ಗಲ್ಲಿನ ಶೀಕ್ಷೆ ತಪ್ಪಿಸಿ, ಗಡಿಪಾರಿನ ಶಿಕ್ಷೆಗೆ ಇಳಿಸಿದನು; ಆದರೆ, ಆ ತರುಣ ರಾಜನಿಗೆ ಅದೂ ಅವಮಾನಕರ ಎನಿಸಿ, ಪಿಸ್ತೂಲಿನಿಂಡ ತನ್ನ ಮೈಯ್ಯಲ್ಲಿ ತಾನೇ ಗುಂಡು ಹಾಕಿಕೊಂಡು ಸತ್ತನು.

## ಕರ್ನಾಟಕದಲ್ಲಿದ್ದ ಗೊಂದಲ

ಉತ್ತರದಲ್ಲಿ ಬಂಡಾಯವೆದ್ದಿರುವಾಗ ದಕ್ಷಿಣದಲ್ಲಿಯೂ ಎಲ್ಲೆಡೆಯಲ್ಲಿ ಬಂಡಾಯದ ಬೇಗೆಯನ್ನು ಹರಡಲು ಗುಪ್ತಚಾರರು ಅಡ್ಡಾಡಿ, ರಾಜರನ್ನೂ ನಾಗರಿಕರನ್ನೂ ಹುರಿದುಂಬಿಸುತ್ತಿದ್ದರು. ಆಗ ಧಾರವಾಡ, ಬೆಳಗಾಂವಿಗಳಲ್ಲಿ ದಂಡಿನ ನಿಲ್ದಾಣಗಳಿದ್ದವು. ಇಲ್ಲಿಯೂ ಆಸಂತೋಷದ ಕಿಡಿ ಬಿದ್ದು ಹೊತ್ತಿ ಕೊಳ್ಳುವದರಲ್ಲಿತ್ತು. ಎಲ್ಲೆಲ್ಲಿಯೂ ಬಂಡಾಯದ ವಾತಾವರಣವೇ ಬೆಳೆದು, ಆದರ ಗಾಳಿಯೇ ಬೀಸುತ್ತಿರುವಾಗ ಅದು ಕರ್ನಾಟಕದ ಮೇಲೆ ಹಾಯದೇ ಇದ್ದೀತೇ ?

## ನರಗುಂದ ಬಂಡಾಯ.

ನರಗುಂದದ ಅರಸನಾದ ಬಾಬಾಸಾಹೇಬನಿಗೂ, ಮೇಲ್ಕಾಣಿಸಿದ ಸುರುಪುರದ ರಾಜನಿಗೂ ವಿಶೇಷ ಪರಿಚಯವಿತ್ತು. ಬಹುದಿನಗಳಿಂದ

ಅವರಿಬ್ಬರೂ ಸ್ವಾತಂತ್ರ್ಯ ಸಮರದೊಳಗೆ ಸೇರಿ ಹೋರಾಡುವ ಹುಮ್ಮಸ್ಸಿನಿಂದ ಹೊಂಚು ಹಾಕುತ್ತಿದ್ದರು. ಸುರುಪುರದ ರಾಜನು ಎದ್ದಾಗ, ಬಾಬಾಸಾಹೇಬನು "ಯೋಗ್ಯ ಸಮಯ ಬರಲಿ" ಎಂದು ಸ್ವಲ್ಪ ಅನುಮಾನಿಸಿದನು. ತನ್ನ ಸಂಸ್ಥಾನವು ಮುನ್ನಡೆಯುವದಕ್ಕೆ ದತ್ತಕ ತೆಗೆದುಕೊಳ್ಳಬೇಕೆಂದು ಅವನು ಯೋಚಿಸಿದ್ದರೂ, ಅದಕ್ಕೆ ಇಂಗ್ಲೀಷ ಸರಕಾರದವರು ಒಪ್ಪಿಗೆ ಕೊಡದ್ದರಿಂದ ಅದೊಂದು ದೊಡ್ಡ ಅಸಮಾಧಾನವೇ ಅವನ ಎದೆಯಲ್ಲಿ ಸುಡುತ್ತಿತ್ತು. ಇದೇ ಕಾಲಕ್ಕೆ ಮುಂಬೈ ಇಲಾಖೆಯಲ್ಲಿಯ ಇನಾಮುದಾರರ ಇನಾಮು ಹೊಲಗಳ ಬಗ್ಗೆ ವಿಚಾರ ಮಾಡಲು ಸರಕಾರದವರು ಒಂದು "ಇನಾಮ ಕಮಿಶನ್ನ" ನಿಯಮಿಸಿದರು. ಈ ಇನಾಮ ಕಮಿಶನ್ನಿನಲ್ಲಿ ಮ್ಯಾನ್‌ಸನ್ ಎಂಬ ಸಾಹೇಬನು ಮುಖ್ಯಸ್ಥನಾಗಿದ್ದನು. ಇವನಿಗೆ ದೇಶೀಯ ಸಂಸ್ಥಾನಿಕರ ಇನಾಮುಗಳ ಮೇಲೆ ಕಣ್ಣು ಇದ್ದುದರಿಂದ ಅವುಗಳನ್ನೆಲ್ಲ ರದ್ದು ಪಡಿಸಬೇಕೆಂಬ ಹಂಬಲ. ಇದರಿಂದ, ಸಾಮಾನ್ಯವಾಗಿ ಎಲ್ಲ ಸಂಸ್ಥಾನಿಕರಿಗೂ ಇವನು ಬೇಡಾಗಿದ್ದನು. ನರಗುಂದ ಬಾಬಾಸಾಹೇಬನಿಗೂ ಮ್ಯಾನ್‌ಸನ್ನನ ಝಳ ಅಲ್ಪ ಸ್ವಲ್ಪ ತಾಕಿತ್ತು. "ಸಂಸ್ಥಾನಿಕರಾದ ನೀವು ದೇವರು, ಧರ್ಮ ಕಾರ್ಯಗಳಿಗೆ ಮನಬಂದಂತೆ ವೆಚ್ಚ ಮಾಡುತ್ತೀರಿ" ಎಂದು ಒಮ್ಮೆ ಎಚ್ಚರಿಕೆ ಕೊಟ್ಟಿದ್ದನಂತೆ. ಇದರಿಂದಂತೂ, ಬಾಬಾಸಾಹೇಬನಂಥ ಅಭಿಮಾನಿಯಾದ ಮೂರ್ತಿಗೆ ಆ ಮಾತು ಮುಳ್ಳಿನಂತೆ ಚುಚ್ಚುತ್ತಿತ್ತು. ಬಾಬಾಸಾಹೇಬನು ಸಿಟ್ಟಿನವನೂ, ಅಭಿಮಾನಿಯೂ ಧರ್ಮ ನಿಷ್ಠೆಯುಳ್ಳವನೂ, ಸುಶೀಲನೂ ಇದ್ದನು. ಪರದೇಶಿಯ ಇಂಗ್ಲೀಷರು ನಮ್ಮ ದೇಶದಲ್ಲಿ ರಾಜ್ಯವಾಳುವದು, ನಮ್ಮಲ್ಲಿಯ ಸಂಸ್ಥಾನಿಕರು, ಜಹಗೀರದಾರರು ಮುಂತಾದವರ ಹಕ್ಕು-ಬಾಧ್ಯತೆಗಳನ್ನು ಮುಳುಗಿಸಿ, ಅವಮಾನಕ್ಕೀಡು ಮಾಡುವದು ಅವನಿಗೆ ಎಷ್ಟು ಮಾತ್ರವೂ ಸಮ್ಮತವಿರಲಿಲ್ಲ. ಈ ಸಮಯದಲ್ಲಿ ನಾವು ಮೂಕರಂತೆಯೂ, ನಾಚಿಕೆಗೇಡಿಗಳಾಗಿಯೂ, ಬಾಯಿ ಮುಚ್ಚಿಕೊಂಡಿರುವದು ಉಚಿತವಲ್ಲ ನಿಜವಾದ ಶೂರನು ಇದನ್ನೆಂದೂ ಸಹಿಸಲಾಗದು. ಎಂದು ಮುಂತಾಗಿ ಸಂಸ್ಥಾನಿಕರಿಗೆ ಕಾಗದ ಬರೆದು, ಅವರನ್ನೆಲ್ಲ ತನ್ನೊಡನೆ ಬಂಡಾಯದಲ್ಲಿ ಸೇರಲು ಹುರುಪುಗೊಳಿಸಿದ್ದನು. ಆದರೆ, ಅದು ಪ್ರಯೋಜನವಾಗಲಿಲ್ಲ.

## ಬಂಡಾಯದ ಗೊಂದಲ

ಇಷ್ಟೊತ್ತಿಗೆ ಕರ್ನಾಟಕದಲ್ಲಿ ಅಲ್ಲಲ್ಲಿ ಬಂಡಾಯದ ಗೊಂದಲ ನಡೆದಿರುವದಾಗಿಯೂ, ಅದರೊಳಗೆ ನರಗುಂದ ಬಾಬಾಸಾಹೇಬನು ಸೇರಿರುವದಾಗಿಯೂ ಇಂಗ್ಲೀಷರಿಗೆ ಸಂಶಯ ಬಂದಿತು. ಅದಕ್ಕೆ ತಕ್ಕಂತೆ ಮೊದಲು ಇಂಗ್ಲೀಷರಿಗೆ ಒಪ್ಪಿಸಿರುವ ಶಸ್ತ್ರಗಳನ್ನು ಬಾಬಾಸಾಹೇಬನ ಪಕ್ಷದ ಜನರು ಅರ್ಧದಾರಿಯಲ್ಲಿಯೇ ಗಂಟುಬಿದ್ದು ಕಸಿದುಕೊಂಡಿರುವ ಸುದ್ದಿ ಇಂಗ್ಲೀಷರಿಗೆ ತಿಳಿಯಿತು ಇದನ್ನು ಕೇಳಿ, ಆಗಿನ ದಕ್ಷಿಣ ಸಂಸ್ಥಾನಗಳ ರಾಜಕೀಯ ವಿಭಾಗದ ಏಜಂಟನಾದ ಜೇಕಬ ಸಾಹೇಬನು ನರಗುಂದಕ್ಕೆ ದಂಡು ಕಳಿಸುವ ಕೆಲಸದಲ್ಲಿ ತೊಡಗಿದನು. ಇತ್ತ ಮ್ಯಾನ್‌ಸನ್ ಸಾಹೇಬನು ಹತ್ತು ಹನ್ನೆರಡು ಮಂದಿ ಕುದುರೆ ಸವಾರರೊಡನೆ ರಾಮದುರ್ಗಕ್ಕೆ ಧಾವಿಸಿಬಂದನು. ಮತ್ತು ನರಗುಂದ, ಸಾಂಗಲಿ, ಮಿರ್ಜಿ ಮುಂತಾದ ಊರುಗಳಿಗೆ ತತ್‌ಕ್ಷಣವೇ ಸೈನ್ಯ ಕಳಿಸಲು ಜೇಕಬ್ ಸಾಹೇಬನಿಗೆ ಬರೆದು, ತಾನು ರಾಮದುರ್ಗದಲ್ಲಿದ್ದು ಅತ್ತಕಡೆಯಿಂದ ಸೈನ್ಯ ಬರುವ ದಾರಿ ಕಾಯುಹತ್ತಿದನು: ಮುಂದೆ ಸೈನ್ಯದವರು ಬಂದಮೇಲೆ ಆ ದಂಡಿನವರೊಡನೆ ನರಗುಂದದ ಕಡೆಗೆ ಹೊರಟನು.

## ಬಾಬಾಸಾಹೇಬನ ಹೊಂಚು.

ಬಾಬಾಸಾಹೇಬನು ಮ್ಯಾನ್‌ಸನ್ನ ಸಾಹೇಬನ ಸುಳುವು-ಸುದ್ದಿಗಳನ್ನು ತಿಳಿದುಕೊಂಡು, ತನಗೆ ತಿಳಿಸಲಿಕ್ಕೆಂದು ಎಲ್ಲೆಡೆಯಲ್ಲಿ ಜನರನ್ನು ಇಟ್ಟಿದ್ದನು. ಅವರಿಂದ ಮ್ಯಾನ್‌ಸನ್ನನು ಸುರೇಬಾನ ವರೆಗೆ ಬಂದ ವರ್ತಮಾನವು ಗೊತ್ತಾಯಿತು. ತನ್ನನ್ನು ಹಿಡಿಯಲಿಕ್ಕೇ ಬರುತ್ತಿರುವನೆಂಬ ಸಂದೇಹದಿಂದ ಬಾಬಾಸಾಹೇಬನು ಎಂಟು ನೂರು ಜನರದೊಂದು ದಂಡು ಕಟ್ಟಿಕೊಂಡು ಮ್ಯಾನ್‌ಸನ್ನನನ್ನು ಹುಡುಕಲು ಹೊರಟನು. ಮ್ಯಾನ್‌ಸನ್ನ ಸಾಹೇಬನ ದೆಸೆಯಿಂದ ಅವನಲ್ಲಿ ಮೊದಲಿನಿಂದಲೂ ಬಲು ಸಿಟ್ಟು ಇದ್ದುದರಿಂದ, ಈ ಸುದ್ದಿಯನ್ನು ಕೇಳಿದ ಮ್ಯಾನ್‌ಸನ್ನನಿಗೆ ಭಯವೆನಿಸಿತು. ಬಾಬಾಸಾಹೇಬನಿಗಂತೂ, ಆ

ಸಾಹೇಬನನ್ನು ಹಿಡಿದು, ಯಾವಾಗ ಕೊಂದೇನು ಎಂಬುವ ಆವೇಶ. ಅವನನ್ನು ಹಿಡಿದುಕೊಟ್ಟವರಿಗೆ ಸಾವಿರ ರೂಪಾಯಿ ಕಾಣಿಕೆ ಕೊಡುವೆನೆಂದು ಸಾರಿದ್ದನು. ಇಂಥ ವಿಷಮ ಪರಿಸ್ಥಿತಿಯಲ್ಲಿ ತಾನು ಬಾಬಾಸಾಹೇಬನ ಸೀಮೆಯಲ್ಲಿ ಬಂದುದು ದೊಡ್ಡ ತಪ್ಪಾಯಿತೆಂದು ಸಾಹೇಬನಿಗೆ ಮನದಟ್ಟಾಗಿ ಅವನು ತನ್ನ ಜೀವವನ್ನು ಉಳಿಸಿಕೊಳ್ಳುವ ದಾರಿ ಹುಡುಕಹತ್ತಿದನು. ಆ ಸಮಯದಲ್ಲಿ ಸಾಹೇಬನು ಸುರೆಬಾನದ ಒಂದು ಮುರುಕ ಧರ್ಮ ಶಾಲೆಯಲ್ಲಿದ್ದನು. ಬಾಬಾಸಾಹೇಬನು ಹುಡುಕುತ್ತ ಅವನಿರುವ ಸ್ಥಳದ ಕಡೆಗೆ ಸೀದಾ ಬಂದನು. ಆಗಂತೂ ಸಾಹೇಬನು ತುಂಬ ಗಾಬರಿಯಾದನು. ತನ್ನ ಹತ್ತಿರವಿದ್ದ ಪಿಸ್ತೋಲನ್ನು ಮದ್ದಿನಿಂದ ತುಂಬಿ ತನ್ನ ಬಳಿಯಲ್ಲಿ ಮತ್ತಷ್ಟು ಮದ್ದು–ಗುಂಡುಗಳನ್ನು ತೆಗೆದುಕೊಂಡು, ಅವನು ನೆರೆಯಲ್ಲಿಯೇ ಇದ್ದ ಹನುಮಪ್ಪನ ದೇವಾಲಯದಲ್ಲಿ ಅಡಗಿಕೊಂಡನು. ಬಾಬಾಸಾಹೇಬನ ದಂಡಾಳುಗಳು ಧರ್ಮಶಾಲೆಗೆ ಬಂದು 'ಸಾಹೇಬರೆಲ್ಲಿ?' ಎಂದು ಕೇಳಿದರು. ಅವರಲ್ಲಿ ಯಾರೂ ಉತ್ತರ ಕೊಡಲಿಲ್ಲ. ಆದುದರಿಂದ ಸಿಟ್ಟಿಗೆದ್ದ ಜನರು ಅವರನ್ನು ಕೊಂದು ಹಾಕಿದರು. ಕೊನೆಗೆ ಅತ್ತಿತ್ತ ಹುಡುಕಿ ಬಾಬಾಸಾಹೇಬನ ಜನರೇ ಗೊತ್ತು ಹಚ್ಚಿದರು. ಸಾಹೇಬನು ಒಳಗೆ ಕುಳಿತುಕೊಂಡು, ಚಿಲಕ ಹಾಕಿದ್ದನ್ನು ನೋಡಿ, ಬಾಗಿಲವನ್ನು ಮುರಿದು ಒಳ ಹೊಕ್ಕರು. ತನ್ನ ಜೀವ ಉಳಿಸಿಕೊಳ್ಳಲು ಸಾಹೇಬನು ಪಿಸ್ತೂಲ ಹಾರಿಸಿದನು. ಮತ್ತೆ ಮದ್ದು ತುಂಬುವಷ್ಟರಲ್ಲಿ ಬಾಬಾ ಸಾಹೇಬನ ಅಂಗರಕ್ಷಕನಾದ ವಿಷ್ಣು ಎಂಬುವನು ಮ್ಯಾನ್‌ಸನ್ನನ ಮೈಮೇಲೇರಿ ಹೋಗಿ ಸಾಹೇಬನ ರುಂಡವನ್ನು ಹಾರಿಸಿದನು. ಎಲ್ಲರೂ ಕೂಡಿ ಆ ರುಂಡವನ್ನು ಮೆರೆಯಿಸುತ್ತ ಕಾಳಿ ಊದಿಸುತ್ತ ನರಗುಂದಕ್ಕೆ ಒಯ್ದು ಅದನ್ನು ಅಗಸೆ ಬಾಗಿಲಕ್ಕೆ ಕಟ್ಟಿದರು.

## ನರಗುಂದಕ್ಕೆ ಬಂದಮೇಲೆ

ನರಗುಂದಕ್ಕೆ ಬಂದಮೇಲೆ ಅವರು ಮ್ಯಾನ್‌ಸನ್ನ ಸಾಹೇಬನ ಹತ್ತಿರ ಇದ್ದ ಕಾಗದ ಪತ್ರಗಳ ಗಂಟನ್ನು ಬಿಚ್ಚಿ ನೋಡಹತ್ತಿದರು. ಅವುಗಳಲ್ಲಿ

ನರಗುಂದದಲ್ಲಿಯು ಒಬ್ಬಿಬ್ಬರ ಕೈ ಬರಹದ ಕಾಗದಗಳಿದ್ದವು. ಅವುಗಳನ್ನು ಸುಮ್ಮನೆ ಓದುತ್ತಿರುವ ಹಾಗೆಯೇ "ಬಾಬಾಸಾಹೇಬನು ಸಿದ್ಧಪಡಿಸಿಟ್ಟಿರುವ ಮದ್ದು ಹಾರದಂತೆ ಅದರಲ್ಲಿ ಸೆಗಣಿಯನ್ನು ಬೆರಸಿ ಇಟ್ಟಿರುವೆವು ನೀನೇನು ಆ ಬಗ್ಗೆ ಯೋಚನೆ ಮಾಡಬಾರದು" ಎಂಬೀ ವಾಕ್ಯಗಳಿದ್ದವು. ಬಾಬಾಸಾಹೇಬನ ಆಶ್ರಯದಲ್ಲಿಯೇ ಇದ್ದ ಒಬ್ಬಿಬ್ಬ ದುಷ್ಟರು ಈ ಫಿತೂರಿಯ ಕಾರ್ಯ ಮಾಡಿದ್ದರು. ತತ್‌ಕ್ಷಣವೇ ಅವರಿಬ್ಬರನ್ನು ಹಿಡಿದು ಕೊಟ್ಟವರಿಗೆ ಇನಾಮು ಕೊಡಲಾಗುವದೆಂದು ಡಂಗುರ ಹೊಯ್ಸಿದನು. ಈ ಸುದ್ದಿಯನ್ನು ಕೇಳಿ, ತಮ್ಮ ಗುಟ್ಟು ಹೊರಗೆ ಬಿದ್ದುದಕ್ಕಾಗಿ ಹೆದರಿ ಅವರು ಓಡಿ ಹೋದರು. ಹಲವು ದಿವಸ ಕೈಗೆ ಸಿಕ್ಕಲಿಲ್ಲ.

## ನರಗುಂದಕ್ಕೆ ಇಂಗ್ಲೀಷರ ಸೈನ್ಯ.

ಬಾಬಾಸಾಹೇಬನು ತನ್ನ ಊರಲ್ಲಿಯೇ ಇದ್ದನು. ಆದರೂ ಇಂಗ್ಲೀಷರಿಂದ ತನಗೆ ಯಾವ ಅಪಾಯ ಸಂಭವಿಸುವದೋ ಎಂಬ ದುಗುಡವು ಮಾತ್ರ ಆಗಾಗ ಅವನನ್ನು ಪೀಡಿಸುತ್ತಿತ್ತು; ಅದರಿಂದ ಅವನ ಮನಸ್ಸು ಸ್ವಸ್ಥವಿರಲಿಲ್ಲ; ಇಷ್ಟರೊಳಗೆ ಒಂದು ದಿನ ಇಂಗ್ಲೀಷರ ಸೈನ್ಯವು ನರಗುಂದದ ನಿಟ್ಟಿಗೇ ಬರುತ್ತಿರುವ ವರ್ತಮಾನ ಬಂದಿತು. ಆಗ ಮಾತ್ರ ಬಾಬಾಸಾಹೇಬನ ಮುಖ ಬಾಡಿತು. ಯಾವ ಸಂಸ್ಥಾನಿಕರಿಂದ ಸಹಾಯದ ಅಪೇಕ್ಷೆ ಇಲ್ಲ. ಕೈಯ್ಯಲ್ಲಿದ್ದ ಮದ್ದಿನಲ್ಲಿ ದುಷ್ಟರು ಸೆಗಣಿಯನ್ನು ಕೂಡಿಸಿ, ಹಾಳು ಮಾಡಿದರು. ಇಂಥ ಸ್ಥಿತಿಯಲ್ಲಿ ಏನು ಮಾಡಬೇಕೋ ಎಂಬುದು ಅವನಿಗೆ ತಿಳಿಯದಾಯಿತು ಅವನು ಧೈರ್ಯಮಾಡಿ, ಇನ್ನು ಹೆದರಿ ಪ್ರಯೋಜನವೇನು? ಬಂದುದಕ್ಕೆ ತಲೆಗೊಡಲೇಬೇಕು! ಎಂದು ಯುದ್ಧದ ಸನ್ನಾಹ ನಡಿಸಿದನು. ಕೋಟೆಯ ಬಾಗಿಲುಗಳನ್ನು ಇಕ್ಕಿಸಿ, ಎಲ್ಲ ದಂಡಾಳುಗಳಿಗೆ ಕೋಟೆಯಲ್ಲಿಯೇ ವಿವಿಧ ವ್ಯವಸ್ಥೆ ಮಾಡಿಸಿದನು. ಕೋಟೆಯು ಬಲು ಭದ್ರವಾಗಿದ್ದು, ಅನ್ನ-ನೀರಿನ ಸಂಗ್ರಹವು ಚನ್ನಾಗಿತ್ತು. ೧೮೫೭ ನೆ ಇಸ್ವಿಯ ಜೂನ ೧ ನೇ ದಿನಾಂಕ ಮ್ಯಾಲ್ಕಂಸಾಹೇಬನು ಬಾಬಾಸಾಹೇಬನ ಸಂಗಡ ಕಾಳಗವನ್ನು ಹೂಡಿದನು. ಬಾಬಾಸಾಹೇಬನ ದಂಡಿನ ಜನರೂ ಕಡಿಮೆ; ಮದ್ದು-ಗುಂಡು

ಗಳ ಸಂಗ್ರಹವೂ ಅಷ್ಟಕ್ಕಷ್ಟೇ! ಆದರೂ ತನ್ನಲ್ಲಿ ಸಾಮಗ್ರಿ ಇರುವವರೆಗೆ ಅವನು ಜನರನ್ನು ಬೆನ್ನಾಸರಕ್ಕೆ ಇಟ್ಟುಕೊಂಡು ಕಾದಿದನು. ಮದ್ದು-ಗುಂಡುಗಳ ಸಾಮಗ್ರಿ ಮುಗಿದ ನಂತರ ಬಾಬಾಸಾಹೇಬನಿಗೆ ತಾನಿನ್ನು ಸೋಲುವ ಸಮಯ ಕಟ್ಟಿಟ್ಟುದೆಂದು ಮನಸ್ಸಿನಲ್ಲಿ ದೃಢಪಡಿಸಿಕೊಂಡನು. ಆಗ ಅವನು ನೇರವಾಗಿ ತನ್ನ ಅರಮನೆಗೆ ಹೋಗಿ, ತನ್ನಲ್ಲಿರುವ ಬೇರೆ ಸಂಸ್ಥಾನಿಕರ ಕಾಗದ ಪತ್ರಗಳನ್ನೆಲ್ಲ ಸುಟ್ಟು, ತನ್ನ ವೃದ್ಧ ತಾಯಿ ಮತ್ತು ಹೆಂಡತಿಯನ್ನು ಕರೆದು, ತಾಯಿಯ ಕಾಲುಗಳಿಗೆರಗಿ, "ಅವ್ವಾ! ಇಂದಿಗೆ ನನ್ನ ನಿಮ್ಮ ಋಣಾನುಬಂಧವು ಮುಗಿಯಿತು. ಇಂಗ್ಲೀಷರ ಮುಂದೆ ನಾವು ಈಡಲ್ಲ. ಅರಸನಾಗಿ ಹುಟ್ಟಿ ನನ್ನ ನಾಡಿಗಾಗಿ ಹೋರಾಡಬೇಕೆಂದರೆ, ನನ್ನಲ್ಲಿದ್ದುಬಿದ್ದ ಮದ್ದೆಲ್ಲ ದುಷ್ಟರ ಕೈಗೆ ಸಿಲುಕಿ ಕೆಟ್ಟು ಹೋಯಿತು. ಶತ್ರುಗಳ ಕೈಗೆ ನಾವು ಸಿಕ್ಕರೆ, ನಮ್ಮನ್ನು ಎಷ್ಟು ಪರಿಯಿಂದ ಚಿತ್ರಹಿಂಸೆ ಪಡಿಸುವರೆಂಬುದನ್ನು ಕಾಣೆ; ಆದುದರಿಂದ ನಾವೆಲ್ಲರೂ ನಮಗೆ ತೋರಿದ ದಾರಿಯಿಂದ ಇಲ್ಲಿಂದ ಕಾಲ್ದೆಗೆದು ಪಾರಾಗಲಿಕ್ಕೇಬೇಕು. ನಾನಂತೂ ಓಡಿ ಹೋಗುವೆ. ನಿಮ್ಮನ್ನು ಬೆನ್ನಿಗೆ ಕಟ್ಟಿಕೊಂಡು ಹೋಗಲಿಕ್ಕೆ ಇದು ತಕ್ಕ ಸಮಯ ವಲ್ಲ" ಎಂದು ಹೇಳಿ, ಮತ್ತೊಮ್ಮೆ ತಾಯಿಯ ಪಾದಗಳಿಗೆ ಬಿದ್ದು, ಹೊರಡುವಷ್ಟರಲ್ಲಿ ಹೆಂಡತಿಯಾದ ಸಾವಿತ್ರೀಬಾಯಿಯು "ನನ್ನನ್ನು ತಮ್ಮ ಸಂಗಡವಾದರೂ ಕರೆದುಕೊಂಡು ಹೋಗಿರಿ, ಇಲ್ಲವಾದರೆ, ನಿಮ್ಮ ಕೈಯೊಳಗಿನ ಕತ್ತಿಯಿಂದ ಕೊಂದು ಹೊರಡಿರಿ" ಎಂದು ಕೊನೆಯ ಮಾತುಗಳನ್ನಾಡಿದಾಗ, ಬಾಬಾಸಾಹೇಬನು ಮೈಮೇಲೆ ಮುಳ್ಳು ಬಂದು, ದುಃಖ ಒತ್ತರಿಸಿತು; ಆದರೂ, ಹೇಗೋ ಅದನ್ನೆಲ್ಲ ನುಂಗಿಕೊಂಡು, ಹೆಂಡತಿಗೆ ಧೈರ್ಯ ಹೇಳಿ, "ಈಗ ವೇಳೆ ಇಲ್ಲ. ದೇವರು ಮಾಡಿಸಿದ್ದಾಗಲಿ" ಎಂದು ಹೊರಟನು. ಅವನ ತಾಯಿ ಮತ್ತು ಹೆಂಡತಿ ಅವರಿಬ್ಬರೂ ದುಃಖದಿಂದ ಏನು ಮಾಡಬೇಕೆಂಬುದನ್ನು ತಿಳಿಯದೆ, ರಾಮಚಂದ್ರನೆಂಬ ತಮ್ಮ ನೆಂಟನನ್ನು ಸಂಗಡ ಕರಕೊಂಡು, ಅರಮನೆಯಿಂದ ಹೊರಟು, ಇಂಗ್ಲೀಷರ ಸೈನಿಕರ ಕಣ್ಣಿಗೆ ಬೀಳದಂತೆ ಪಾರಾದರು.

## ನರಗುಂದದಲ್ಲಿ ಹಾವಳಿ.

ಆ ಮೇಲೆ ಇಂಗ್ಲೀಷ ಸೈನಿಕರು ನರಗುಂದ ಕೋಟೆಯ ಮೇಲೆ ತಮ್ಮ ಧ್ವಜವನ್ನೇರಿಸಿ ಅರಮನೆ ಮತ್ತು ಊರೊಳಗೆ ಹೊಕ್ಕು ಕೈಗೆ ಬಂದ ಸಾಮಾನುಗಳನ್ನೆಲ್ಲ ಸುಲಿಗೆ ಮಾಡಿದರು. ಊರು ಸಮೃದ್ಧವಾಗಿದ್ದರಿಂದ, ಸುಲಿಗೆಗಾರರ ಕೈಗೆ ವಿಪುಲ ಸುಲಿಗೆಯು ಸಿಕ್ಕಿತು. ಹೀಗೆ ಮೂರು-ನಾಲ್ಕು ದಿನ ನಡೆದ ಮೇಲೆ ಊರಲ್ಲಿ ಶಾಂತತೆ ಆಯಿತು. ಮುಂದೆ ಇಂಗ್ಲೀಷ ಸರಕಾರದವರು ಸೂಟರ ಎಂಬ ಸಾಹೇಬನನ್ನು ಬಾಬಾ ಸಾಹೇಬನನ್ನು ಹುಡುಕಲಿಕ್ಕೆಂದೇ ನಿಯಮಿಸಿದರು. ಬಾಬಾ ಸಾಹೇಬನು ಬಾವಾನ ವೇಷದಿಂದ ಅಲ್ಲಲ್ಲಿ ಆಡಗುತ್ತ-ಅಡ್ಡಾಡುತ್ತ ಇದ್ದನು. ಅವನ ಸಂಗಡ ಕೆಲವು ಜನರು ಇದ್ದರು. ಅವರು ರಾತ್ರಿಯಲ್ಲಿಯೇ ಪ್ರವಾಸ ಮಾಡುತ್ತಿದ್ದರು. ದಾರಿಯ ಪ್ರವಾಸ, ಉಪವಾಸ-ವನವಾಸ, ಚಳಿ-ಬಿಸಿಲು, ಮುಂತಾದ ಒಂದಲ್ಲ-ಎರಡಲ್ಲ ಹಲವು ಬಗೆಯ ಕಷ್ಟಗಳಿಂದ ಅವನು ಇಷ್ಟರಲ್ಲಿಯೇ ಹಣ್ಣಾಗಿದ್ದನು. ಆದರೂ, ಬಾಬಾಸಾಹೇಬನದು ವೀರ ಜೀವ. ಮಿಂಚಿ ಹೋದ ಮಾತಿಗೆ ಎಳ್ಳಷ್ಟಾದರೂ ಚಿಂತಿಸದೆ, ಪಶ್ಚಾತ್ತಾಪ ಪಡದೆ ಅವನು ದುಃಖದೊಳಗೆ ಸುಖವನ್ನು ಕಾಣುತ್ತ। ಸಾತಂತ್ರ್ಯಕ್ಕಾಗಿ ಹೋರಾಡಿ, ದೇಹವನ್ನು ಹುಲ್ಲಿನ ಕಡ್ಡಿಯಂತೆ ಭಾವಿಸಿದ ಧೀರ. ಸ್ವಾತಂತ್ರ್ಯದ ಸವಿಯನ್ನುಂಡವರಿಗೆ ಪಾರತಂತ್ರ್ಯದ ಸುಖವೆಂದರೆ ಹಾರಾಡುವ ಹಕ್ಕಿಯನ್ನು ಪಂಜರದಲ್ಲಿಟ್ಟಂತೆ. ಆ ಪಂಜರದೊಳಗೆ ಅವರಿಗೆ ಎಷ್ಟು ಸುಖದಿಂದ ಇಟ್ಟರೆ ತಾನೇ ಏನು? ಆ ಜೀವನಕ್ಕಿಂತ ಸಾವೇ ಮೇಲೆನಿಸಿ ಅವರು ಮೃತ್ಯುವಿನ ಮಡುವಿಗೆ ಧುಮುಕುವರು. ವೀರರಿಗೆ ಮರಣವೇ ಜೀವನವಾದರೆ, ಹೇಡಿಗಳಿಗೆ ಜೀವನವೇ ಮರಣ. ಸಾವು-ಬಾಳುಗಳ ಈ ಗುಟ್ಟು ಮತ್ತು ಸವಿಯು ವೀರ ಮತ್ತು ದೇವ ಜೀವಿಗಳಿಗೆ ಗೊತ್ತಿದ್ದು ಅದೇ ಅವರ ದಿನದ ಆಹಾರವಾದ್ದರಿಂದ, ಪಶು-ಜೀವಿಗಳಿಗೆ ಅದೊಂದು ಕಟ್ಟೆಚ್ಚರಿ ಎನಿಸುವದು. ದೇಶಕ್ಕೆ ದಾರಿ ತೋರಿಸಲು ಇಂತಹ ವೀರ ಮತ್ತು ದೇವ ಜೀವಿಗಳು ಹುಟ್ಟುವರು. ಬಾಬಾಸಾಹೇಬನು ಅಂಥ ದಿವ್ಯ ನರಪತಿ.

## ಬಾಬಾಸಾಹೇಬನ ಗತಿ.

ಬಾಬಾಸಾಹೇಬನು ಹೀಗೆ ಗುಪ್ತ ವೇಷದಿಂದ ಅಲೆದಾಡುತ್ತಿರುವಾಗಲೇ, ಒಂದು ದಿನ ಆಕಸ್ಮಾತ್ತಾಗಿ ತೋರಗಲ್ಲಿನ ಗೌಡರ ಮನೆಯಲ್ಲಿರುವಾಗ, ಸೂಟರ ಸಾಹೇಬನೂ ಗೌಡರ ಮನೆ ಹುಡುಕುತ್ತ ಅಲ್ಲಿಗೆ ಬಂದನು ಸೂಟರನೊಡನೆ ಕೆಲವು ಜನ ಸಿಪಾಯರು ಇದ್ದುದರಿಂದ ಬಾಬಾಸಾಹೇಬನಿಗೆ ಓಡಿ ಹೋಗಲು ಅನುವಾಗಲಿಲ್ಲ. ಅವನು ಸಿಕ್ಕು ಬಿದ್ದನು. ಮುಂದೆ ಅವನನ್ನು ಬಂಧಿಸಿ, ಬೆಳಗಾಂವಿಗೆ ಒಯ್ದನು. ಅಲ್ಲಿ ಹೋದಮೇಲೆ ಪದ್ಧತಿಯಂತೆ ನ್ಯಾಯ ಕಚೇರಿಯಲ್ಲಿ ಅವನ ವಿಚಾರಣೆ ನಡೆಯಿತು. ಅವನಿಗೆ ನ್ಯಾಯಾಧೀಶನು ಗಲ್ಲಿನ ಶಿಕ್ಷೆಯನ್ನು ಹೇಳಿದನು. ತನ್ನ ಹೇಳಿಕೆಯಲ್ಲಿ ಬಾಬಾಸಾಹೇಬನು "ವ್ಯಾಪಾರಿಗಳಾದ ಇಂಗ್ಲೀಷರು ತಮ್ಮ ಮಾತಿನಂತೆ ನಡೆದಿದ್ದರೆ, ನಮ್ಮಂಥವರಿಗೆ ಯುದ್ಧ ಹೂಡುವ ಪ್ರಸಂಗವೇ ಬರುತ್ತಿರಲಿಲ್ಲ. ಅವರನ್ನೆಚ್ಚರಿಸಲಿಕ್ಕೆ ಮಾಡಿದ ಪ್ರಯತ್ನದ ಪರಿಣಾಮವೇ ಈ ಗಲ್ಲು. ಇನ್ನಾದರೂ ನ್ಯಾಯಮಾರ್ಗವನ್ನು ಹಿಡಿಯಲು ದೇವರು ಬ್ರಿಟೀಶರಿಗೆ ಬುದ್ಧಿಯನ್ನು ಕೊಡಲಿ" ಎಂದು ಸುಮ್ಮನಾದನು. ಒಂದೆರಡು ದಿನಗಳಲ್ಲಿಯೇ ಮುಂದೆ ಅವನಿಗೆ ಗಲ್ಲಿಗೇರಿಸಲಾಯಿತು. ಈ ಎದೆ ಬಿರಿಯುವ ನೋಟವನ್ನು ನೋಡಲು ಸಾವಿರಾರು ಜನರು ನೆರೆದಿದ್ದರು. ಎಲ್ಲರೂ ಕಣ್ಣೀರಿಡುತ್ತ ಮನೆಯದಾರಿ ಹಿಡಿದರು.

## ಬಾಬಾಸಾಹೇಬನ ತಾಯಿ ಮತ್ತು ಹೆಂಡತಿಯರ ಕೊನೆ

ಅತ್ತೆ-ಸೊಸೆಯರಿಬ್ಬರು ಬಳಲುತ್ತ ತೊಳಲುತ್ತ, ಹಲವುತರದ ಕಷ್ಟಗಳನ್ನು ಅನುಭವಿಸುತ್ತ ಅಲ್ಲಲ್ಲಿ ತಿರುಗಿ "ಇನ್ನು ಜಲದೇವತೆಗೆ ತಮ್ಮ ದೇಹಗಳನ್ನರ್ಪಿಸಬೇಕೆಂದು ಮನಸ್ಸು ಗಟ್ಟಿಮಾಡಿ" ದೇವರನ್ನು ಸ್ಮರಿಸುತ್ತ ಸಂಗಳ ಗ್ರಾಮದ ಹತ್ತಿರ ಮಲಪ್ರಭಾ ಹೊಳೆಯಲ್ಲಿ ಹಾರಿಕೊಂಡು ಜನ್ಮ ನೀಗಿದರು. ಅವರಿಬ್ಬರ ದೇಹಗಳು ನರಗುಂದ ಸಂಸ್ಥಾನಕ್ಕೆ ಸೇರಿದ ಬೂದಿಹಾಳ ಗ್ರಾಮದ ಹತ್ತಿರ ಹರಿದಿರುವ ಹೊಳೆಯ ದಂಡೆಗೆ ತೇಲುತ್ತ ಬಂದು ಬಿದ್ದಿ

ದ್ದವು. ಅವುಗಳನ್ನು ಗುರುತು ಹಿಡಿದು, ಅಲ್ಲಿಯ ಜನರು ಯಾರಿಗೂ ತಿಳಿಯಗೊಡದಂತೆ ಸುಟ್ಟುಬಿಟ್ಟರು.

## ಅಮರ ಜೀವಿಗಳು.

ನರಗುಂದ ಸಂಸ್ಥಾನವು ಹಾಳಾದರೂ, ಇಂದಿಗೂ ನರಗುಂದ ಹಾಗೂ ಬೇರೆ ಕಡೆಯಲ್ಲಿ ಅವರ ಜೀವನವನ್ನು ಎಲ್ಲರೂ ಸ್ಮರಿಸುವರು. ಕಣ್ಣಿಗೆ ಕಾಣಿಸುವಂತೆ, ಅವರ ಮನೆತನ-ಸಂಸ್ಥಾನ ಇರದಿದ್ದರೂ, ಪ್ರತಿ ಮನೆಯಲ್ಲಿ ಪ್ರತಿಯೊಬ್ಬರ ಮನಸಿನಲ್ಲಿ ಅವರ ದಿವ್ಯ ಜೀವನದ ಸ್ಮೃತಿಯು ಅಮರವಾಗಿ ಪ್ರಜ್ವಲಿಸುತ್ತಿದೆ.

## ಮುಂಡರಿಗೆಯ ಭೀಮರಾಯರು.

ಹಿಂದುಸ್ತಾನದಲ್ಲಿದ್ದ ಸ್ವಾತಂತ್ರ್ಯ ಸಂಗ್ರಾಮದೊಳಗಿನ ಇದೊಂದು ಕೊನೆಯ ಜ್ಯೋತಿ. ಭೀಮರಾಯರು ಮುಂಡರಿಗಿಯ ನಾಡಗೌಡರು. ಮೊಂಡಗೈ ಭೀಮರಾಯರ ಮೊಮ್ಮಕ್ಕಳು ಇಂಗ್ಲೀಷ ಕಲಿತು, ಬಳ್ಳಾರಿ, ಹರಪನಹಳ್ಳಿಗಳಲ್ಲಿ ಮಾಮಲೇದಾರರಿದ್ದರು. ಗುರಿ ಹೊಡೆಯುವದರಲ್ಲಿ, ಬೇಟೆಯಾಡುವದರಲ್ಲಿ ಬಲು ಗಟ್ಟಿಗರು. ಬೇಟೆಯ ಪ್ರಸಂಗ ಬಂದಾಗ, ಹುಲಿಗೆ ಎದುರಾಳಿಯಾಗಿ ನಿಂತು, ಎಡಗೈಗೆ ಅರಿವೆ ಕಟ್ಟಿಕೊಂಡು, ಅದನ್ನು ಹುಲಿಯ ಬಾಯಿಗೆ ಕೊಟ್ಟು, ಬಲಗೈಯಿಂದ ಹುಲಿ ಹೊಡೆಯುತ್ತಿದ್ದರು. ತುಬಾಕಿಯಿಂದ ಗುರಿಯಿಟ್ಟು ಹಾರುವ ಹಕ್ಕಿಗಳನ್ನು ಹೊಡೆಯುತ್ತಿದ್ದರು. ದತ್ತಕ ಪ್ರಕರಣದಲ್ಲಿ ನರಗುಂದ ಬಾಬಾಸಾಹೇಬರಿಗೂ, ಇವರಿಗೂ ಗೆಳತನವಾಯಿತು. ಇಬ್ಬರೂ ವೀರವೃತ್ತಿಯವರು. ಭೀಮರಾಯರು ಉತ್ತರ ಹಿಂದುಸ್ತಾನದಲ್ಲಿದ್ದ ದಂಗೆಯ ಸುದ್ದಿಯನ್ನು ಕೇಳಿದ್ದರು. ಆದಾಗಲೇ ಅವರ ಮನಸ್ಸಿನಲ್ಲಿ ವೀರಾವೇಶದ ಕಾವೇರತೊಡಗಿತು. ಅವರಾಗ ತಮ್ಮ ಸರಕಾರಿ ಕೆಲಸವನ್ನು ಕಿತ್ತೊಗೆದು ಸ್ವತಂತ್ರರಾಗಿ, ಅಲ್ಲಲ್ಲಿಯ ಶೂರ–ವೀರರನ್ನು ಕೂಡುಹಾಕಿದರು. ಸುಮಾರು ಇನ್ನೂರು-ಮುನ್ನೂರಷ್ಟು ದಂಡಿನ ಜನರನ್ನು ಕೂಡಿಸಿ, ಕೊಪ್ಪಳದ ಕೋಟೆಯನ್ನಾಶ್ರಯಿಸಿ, ದಂಗೆ ಎಬ್ಬಿಸಿದರು. ಭೀಮರಾಯರಿಗೆ ಭವಾನಸಿಂಗ

ಎಂಬ ರಜಪೂತನು ಅಂಗ ರಕ್ಷಕನಾಗಿದ್ದನು. ಬಳ್ಳಾರಿಯಲ್ಲಿದ್ದ ಸರಕಾರಿ ದಂಡಿನವರು ೮–೧೦ ದಿನಗಳವರೆಗೆ ಪ್ರಯತ್ನಪಟ್ಟು, ಬಂಡುಗಾರರೊಡನೆ ಹೋರಾಡಿದರು. ಈ ಹೊಡೆದಾಟದಲ್ಲಿ ಭವಾನಸಿಂಗನು ಸತ್ತನು. ಬಂಡು ಗಾರರ ಮುಖಂಡರಾದ ಭೀಮರಾಯರು ಸಿಗಲಿಲ್ಲ. ಕೈಗೆ ಸಿಕ್ಕ ಬಂಡುಗಾರ ರಲ್ಲಿ ಕೆಲವರನ್ನು ಗಲ್ಲಿಗೇರಿಸಿದರು, ಕೆಲವರನ್ನು ತೋಫಿನ ಬಾಯಿಗೆ ಕೊಟ್ಟರು, ಕೆಲವರನ್ನು ಸೆರೆಮನೆಗೆ ಕಾಣಿಸಿದರು.

ಭೀಮರಾಯರ ಮಕ್ಕಳಾದ ನರಸಿಂಗರಾಯರನ್ನು ಸೆರೆ ಹಿಡಿದು, ನರ ಗುಂದಕ್ಕೆ ಒಯ್ದರು. ಅವರ ಇನಾಮನ್ನು ಬಹುಮಟ್ಟಿಗೆ ಸರಕಾರಕ್ಕೆ ಸೇರಿಸಿ ಕೊಂಡರು. ನರಗುಂದ ದಾವಣಿಯಲ್ಲಿ ಅವರ ವಿಚಾರಣೆ ನಡೆಯಿತು. ಏನಾಗು ತ್ತದೋ, ಯಾವ ಶಿಕ್ಷೆಯನ್ನು ಕೊಡುವರೋ, ಎಂದು ಎಲ್ಲರೂ ಬಾಯಲ್ಲಿ ಬೆರಳಿಟ್ಟುಕೊಂಡು ಕುಳಿತಿದ್ದರು. ನಿರ್ದೋಷಿ ಎಂದು ಅವರನ್ನು ಬಿಟ್ಟರು. ಹೀಗೆ, ಚಿಕ್ಕ, ಚಿಕ್ಕ ಬಂಡಾಯುಗಳನ್ನು ಮುರಿದರು. ತನ್ನ ರಾಷ್ಟ್ರದಿಂದ ಪರರಾಯರನ್ನೋಡಿಸಿ, ಅವರ ಹುಟ್ಟಡಗಿಸುವ ಮಹಾಕಾರ್ಯದಲ್ಲಿ ಭಾರ ತವು ತನ್ನ ಶಕ್ತಿಮೀರಿ ಒದ್ದಾಡಿತು. ಆದರೆ, ಆಗ ಬಯಕೆಗೆ ತಕ್ಕಂತೆ ಕಾಲವು ಅನುಕೂಲವಿರಲಿಲ್ಲ. ಕೆಲ ವರ್ಷಗಳವರೆಗಾದರೂ ಭಾರತವು ಪಾಶ್ಚಾ ತ್ಯರ ದಾಸ್ಯದಲ್ಲಿ ಹೊರಳಾಡುತ್ತಿರಬೇಕಾದ್ದರಿಂದ, ಅಷ್ಟಕ್ಕೆ ಆದರ ಪುಣ್ಯೆ ಮುಗಿಯಿತು. ೩೦ ಕೋಟಿ ಜನರಿಂದ ತುಂಬಿ ತುಳುಕುವ ಜನಾಂಗವು ೧೦೦ ವರ್ಷಗಳವರೆಗೆ ಅಂಖಡವಾಗಿ ಹಿಡಿಯಷ್ಟು ಇಂಗ್ಲೀಷರಿಗೆ ಬೆದರಿ ಅವರಿಗಾಳಾಗಿ, ಅವರ ಆಳಿಕೆ-ಬಾಳಿಕೆ, ಶಿಕ್ಷಣ, ರಾಜ್ಯವಾಳುವ ಕ್ರಮ, ಧೋರಣೆ ಮುಂತಾದವುಗಳಿಗೆ ಮರುಳಾಗಿ, ತನ್ನ ಸ್ವತ್ವವನ್ನೇ ಮರೆತು, ಹುಚ್ಚಾಗಿ ನಿಂತುಕೊಂಡಿತು ನಾಲ್ಕಾರು ಸಾವಿರ ವರ್ಷಗಳ ಏರಿಳಿತಗಳನ್ನು ಕಂಡು ಅನುಭವಿಸಿದ ಋಷಿತುಲ್ಯವಾದ ರಾಷ್ಟ್ರವೆಂದರೇನು? ಅದು ಮೊನ್ನೆ ತಾನೇ ಹುಟ್ಟಿ ಬೆಳೆದ ಇಂಗ್ಲಂಡದ ಆಳಾಗಿರುವದೆಂದರೇನು? ಎಲ್ಲವೂ ಆಶ್ಚರ್ಯವೇ! ಆದರೆ, ಮಕ್ಕಳಂತೆ ಕಣ್ಣು ಮುಚ್ಚಾಲೆಯ ಆಟವನ್ನು ಆಡುವ ಕಾಲನಿಗೆ ಯಾರ ಮರ್ಯಾದೆ ಏನು? ೧೮೫೭ ರ ಬಂಡಾಯದ –ಅಲ್ಲ– ಸ್ವಾತಂತ್ರ್ಯಸಂಗ್ರಾಮಕ್ಕೆ ನೂರು ವರ್ಷಗಳು ಮುಗಿಯುವದ

ರೊಳಗಾಗಿ ಅದಕ್ಕೊಂದು ಹದಗಾಲವು ಒದಗಿತು. ಮಹಾತ್ಮಾ ಗಾಂಧಿಯಂಥ ಮಹಾ ಪುರುಷನ ಇಚ್ಛಾ ಶಕ್ತಿಯಲ್ಲಿ ಭಗವಂತನ ತೇಜಸ್ಸು ಸೇರಿಕೊಂಡು ನೋಡು ನೋಡುವಷ್ಟರಲ್ಲಿ ರಕ್ತದ ಕಾವಲಿ ಹರಿಸದೆ ದೇಶವನ್ನು ಸ್ವತಂತ್ರಗೊಳಿಸಿತು. "ಭಾರತವನ್ನು ಶಸ್ತ್ರಬಲದಿಂದ ಗೆದ್ದಿರುವೆವು. ಅದನ್ನು ಶಸ್ತ್ರ ಬಲದಿಂದಲೇ ಆಳುವೆವು." ಎಂದು ಜಂಬ ಕೊಚ್ಚುತ್ತಿದ್ದ ಬ್ರಿಟೀಶರೇ ನಾಚಿಕೆಯಿಂದ ತಲೆ ತಗ್ಗಿಸಿಕೊಂಡು ಇಂದಿನ ಜಗದ್ಧ ಪ್ರಜಾತಂತ್ರದ ನೀತಿಗೆ ಹೆದರಿ, ತಮ್ಮ ದೇಶಕ್ಕೆ ನಡೆದರು. ಅಂದಿಗೆ ಭಾರತವು ಸ್ವತಂತ್ರವಾಯಿತು. ಇಂದು ನಾವು ಸ್ವತಂತ್ರರು.

**ಮುಗಿದುದು**